ಅನ್ಯಭಾಷಾ ಸಾಹಿತ್ಯ ಸ್ಪಂದನ

# ಶಾಂತಿನಿಕೇತನ



ಕರ್ನಾಟಕ ಸಾಹಿತ್ಯ ಅಕಾಡೆಮಿ

ಅನ್ಯಭಾಷಾ ಸಾಹಿತ್ಯ ಸೊಗಡಿನ ಸ್ಪಂದನ

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಕೊಡವ ಹಾಗೂ ತುಳು ವಿಶೇಷ ವಿಭಾಗಗಳೊಂದಿಗೆ

ಸಂಪಾದಕರು

ಪ್ರೊ॥ ದೊಡ್ಡರಂಗೇಗೌಡ

ಪ್ರೊ॥ ನಲ್ಲೂರು ಪ್ರಸಾದ್



ಕರ್ನಾಟಕ ಸಾಹಿತ್ಯ ಅಕಾಡಮಿ

ಬೆಂಗಳೂರು

**ANIKETHANA** : A Literary Journal (Quarterly)
Edited By : Prof. Doddarangegowda
Prof. Nallur Prasad (R. K. Prasad)
Published By : Registrar, Karnataka Sahithya Academy
Nrupathunga Road, Bangalore - 2

Pages : VIII+144, October-December 1998

Registration No. 45646/88

ಸಂಪುಟ : 10

ಸಂಚಿಕೆ : 2

*ಪ್ರಧಾನ ಸಂಪಾದಕರು*

**ಡಾ। ಗಿರಡ್ಡಿ ಗೋವಿಂದರಾಜ**
ಅಧ್ಯಕ್ಷರು
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು - ೫೬೦ ೦೦೨

ನಿರ್ವಾಹಕರು

**ಟಿ. ಎಸ್. ದಕ್ಷಿಣಾಮೂರ್ತಿ**
ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ
ನಂ. ೧೪/೩ಅ, ನೃಪತುಂಗ ರಸ್ತೆ
ಬೆಂಗಳೂರು - ೫೬೦ ೦೦೨

ಬಿಡಿ ಪ್ರತಿ : ರೂ. ೧೫/-
ವಾರ್ಷಿಕ ಚಂದಾ : ರೂ. ೫೦/-
ಆಜೀವ ಚಂದಾ : ರೂ. ೨೦೦/-

ಮುದ್ರಕರು
ಲಕ್ಷ್ಮಿ ಮುದ್ರಣಾಲಯ
ಬೆಂಗಳೂರು - 18
ದೂರವಾಣಿ : 6613123, 6618752

# ಸಂಪಾದಕೀಯ

ಹೊಸ ವಿನ್ಯಾಸದಲ್ಲಿ ಮೂಡಿಬಂದ 'ಅನಿಕೇತನ'ಕ್ಕೆ ನಮ್ಮ ನಿರೀಕ್ಷೆ ಮೀರಿ ಸ್ವಾಗತ ಸಿಕ್ಕಿದ್ದು ನಮಗೆ ಸಂತಸದ ವಿಷಯ. ಈ ಬಾರಿಯೂ ಸಂಚಿಕೆ ಅತ್ಯುತ್ತಮವಾಗಿ ಪ್ರಕಟವಾಗಬೇಕೆಂಬ ಅಭೀಪ್ಸೆಯಿಂದ ತುಂಬ ಕಾಳಜಿ ವಹಿಸಿ ಈ ಸಂಚಿಕೆಯನ್ನು ಅಣಿಗೊಳಿಸಲಾಗಿದೆ.

ಇಲ್ಲಿನ ವಿಶೇಷವನ್ನು ಸಹೃದಯರು ಗಮನಿಸಬೇಕಾಗಿ ಅರಿಕೆ. ಕನ್ನಡದ ಓದುಗರಿಗೆ ಅನ್ಯಭಾಷೆಗಳಲ್ಲಿನ ಸಾಹಿತ್ಯಕ ಬೆಳವಣಿಗೆಯ ಪರಿಚಯ ಆಗಲಿ ಎಂಬ ದೃಷ್ಟಿಯಿಂದ ಈ ಸಂಚಿಕೆಯಲ್ಲಿ ತುಳು ಮತ್ತು ಕೊಡವ ಭಾಷೆಗಳಲ್ಲಿನ ಗಮನಾರ್ಹ ಸಾಧನೆಯನ್ನು ದಾಖಲಿಸಲು ಸಂಕ್ಷಿಪ್ತ ಸಾಹಿತ್ಯ ಚರಿತ್ರೆಯೊಂದಿಗೆ ಕೆಲವು ಉತ್ತಮ ಅನುವಾದಗಳನ್ನು ಮಂಡಿಸಿದ್ದೇವೆ.

ವಿಶ್ವವೇ ಒಂದು ಪುಟ್ಟ ಹಳ್ಳಿಯಂತಾಗುತ್ತಿರುವ ಗಣಕಯಂತ್ರಗಳ ಈ ಯುಗದಲ್ಲಿ ಇಂಗ್ಲಿಷ್ 'ಅನಿಕೇತನ' ಅಂತರ್‌ಜಾಲದಲ್ಲಿ ಪ್ರಕಟವಾಗಿ ವಿಶ್ವದ ಮೂಲೆಮೂಲೆಗಳನ್ನು ತಲುಪುತ್ತಿರುವುದು ಸಂತಸದ ಸಂಗತಿ.

ಖ್ಯಾತ ನಾಟಕಕಾರರೂ ನಿರ್ದೇಶಕರೂ ಆದ ಗಿರೀಶ್‌ಕಾರ್ನಾಡ್ ಅವರಿಗೆ ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿ ದೊರೆತು, ಕನ್ನಡಕ್ಕೆ ಈ ಪ್ರಶಸ್ತಿ ಏಳನೇ ಬಾರಿ ಲಭ್ಯವಾದಂತಾಗಿದೆ. ಇದು ಕನ್ನಡಿಗರಿಗೆ ಖುಷಿಕೊಡುವ ಸಂಗತಿ. ಸಾಹಿತ್ಯ ಮತ್ತು ರಂಗಭೂಮಿಯ ನೆಲೆಯಲ್ಲಿ ಕನ್ನಡವನ್ನೂ ಅಂತಾರಾಷ್ಟ್ರೀಯ ಮಟ್ಟಕ್ಕೂ ಕೊಂಡೊಯ್ದು ಕಾರ್ನಾಡ್ ಅವರು ಕನ್ನಡ ಸಾರಸ್ವತ ಲೋಕಕ್ಕೆ ಕೋಡು ಮೂಡಿಸಿದ್ದಾರೆ. ಕಾರ್ನಾಡರ ಈ ಮಹತ್ತರ ಸಾಧನೆಗೆ ಅಕಾಡೆಮಿ ಮತ್ತು ಅನಿಕೇತನ ಬಳಗ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಪ್ರೊ॥ ದೊಡ್ಡರಂಗೇಗೌಡ

ಪ್ರೊ॥ ನಲ್ಲೂರು ಪ್ರಸಾದ್

## ಪರಿವಿಡಿ

# ಟ್ರಾಯ್ ನಗರಕ್ಕೆ ಬೆಂಕಿಬಿದ್ದ ರಾತ್ರಿ ಏನಾಯಿತು?
## ( ಒಬ್ಬ ಪ್ರತ್ಯಕ್ಷದರ್ಶಿಯ ವರದಿ! )

---

ಇಂಗ್ಲಿಷ್ ಮೂಲ : **ವರ್ಜಿಲ್**
ಅನು : **ಕೆ. ಎಮ್. ಸೀತಾರಾಮಯ್ಯ**

*ಗ್ರೀಕ್ ಸುಂದರಿ ಹೆಲೆನ್ನಳನ್ನು ಟ್ರೋಜನ್ ರಾಜಕುಮಾರ ಪ್ಯಾರಿಸ್ ಅಪಹರಿಸಿಕೊಂಡು ಹೋದುದು ಟ್ರೋಜನ್ ಮಹಾಯುದ್ಧಕ್ಕೆ ಕಾರಣವಾಯಿತು. ಟ್ರೋಜನರ ಮೇಲೆ ಪ್ರತೀಕಾರವೆಸಗಿ ಹೆಲೆನ್ನಳನ್ನು ಬಿಡಿಸಿಕೊಂಡು ಬರಲು ಗ್ರೀಕರು ಟ್ರಾಯ್‌ನಗರದ ಮೇಲೆ ದಂಡೆತ್ತಿ ಹೋಗಿ ಕೋಟೆಗೆ ಮುತ್ತಿಗೆ ಹಾಕಿ ಕುಳಿತರು. ಹತ್ತನೆಯ ವರ್ಷದಲ್ಲಿ ಅವರಿಗೆ ನೇರವಾಗಿ ಯುದ್ಧ ತೊಡಗಿ, ಗ್ರೀಕರು ಮರದ ಕುದುರೆಯ ತಂತ್ರ ಹೂಡಿ ಕೋಟೆಯನ್ನು ವಶಪಡಿಸಿಕೊಂಡರು. ನಗರಕ್ಕೆ ಬೆಂಕಿ ಹಾಕಿ ಸುಟ್ಟು ಬೂದಿ ಮಾಡಿ, ಯುದ್ಧದಲ್ಲಿ ಗೆದ್ದು ಹೆಲೆನ್ನಳನ್ನು ಬಿಡಿಸಿಕೊಂಡು ಗ್ರೀಸ್‌ದೇಶಕ್ಕೆ ಹಿಂದಿರುಗಿದರು. ಗ್ರೀಕರ ಪೈಕಿ ಅಕಿಲೀಸ್, ಅಯಾಸ್, ಆಂಟಿಲೋಕಸ್ ಮುಂತಾದ ವೀರರು ಸತ್ತರು. ಟ್ರೋಜನರ ಪೈಕಿ ಟ್ರಾಯ್‌ನಗರದ ದೊರೆ ಪ್ರಿಯಾಮನೇ ಆದಿಯಾಗಿ, ಅವನ ಮಕ್ಕಳು, ಅವರಿಗೆ ಸಹಾಯ ಮಾಡಲು ಬೇರೆ ಬೇರೆ ರಾಜ್ಯಗಳಿಂದ ಬಂದಿದ್ದ ಎಲ್ಲ ಹೆಸರಾಂತ ವೀರರೂ ಸತ್ತರು. ಯುದ್ಧದಲ್ಲಿ ಅವರ ಕಡೆ ಬದುಕಿ ಉಳಿದವನೆಂದರೆ ಡಾರ್ಡನ್ ರಾಜಕುಮಾರ ಈನೀಯಸ್ ಒಬ್ಬನೇ. ( ಅವನ ವಂಶಸ್ಥರಿಂದ ಮುಂದೆ ರೋಮ್ ಸಾಮ್ರಾಜ್ಯ ಸ್ಥಾಪನೆಯಾಯಿತು ). ಟ್ರಾಯ್‌ನಗರಕ್ಕೆ ಬೆಂಕಿ ಬಿದ್ದ ರಾತ್ರಿ ಅವನು ತಪ್ಪಿಸಿಕೊಂಡು, ಅಳಿದುಳಿದ ತನ್ನ ಸೇನೆ ಮತ್ತು ಪರಿವಾರದೊಂದಿಗೆ ಹಡಗುಗಳಲ್ಲಿ ಯಾನ ಮಾಡುತ್ತ ಪ್ರತಿಕೂಲ ಮಾರುತಗಳ ದೆಸೆಯಿಂದ ಏಳು ವರ್ಷಗಳ ಕಾಲ ಗುರಿ ಕಾಣದೆ ತೊಳಲಾಡಿ ಕೊನೆಗೆ ಲಿಬ್ಯಾ ದೇಶದ ( ಉತ್ತರ ಆಫ್ರಿಕಾ ಖಂಡ ) ಕಾರ್ಥೇಜ್ ನಗರಕ್ಕೆ ಬಂದು, ಅಲ್ಲಿಯ ರಾಣಿ ಡಿಡೋಳ ಆಶ್ರಯ ಪಡೆಯುತ್ತಾನೆ. ರಾಣಿಯ ಕೋರಿಕೆಯಂತೆ ಈನೀಯಸ್ ತನ್ನ ಸಾಹಸದ ಕಥೆ ಹೇಳುತ್ತಾನೆ. ಟ್ರಾಯ್‌ನಗರಕ್ಕೆ ಬೆಂಕಿ ಬಿದ್ದ ರಾತ್ರಿ ಏನಾಯಿತು? ಯುದ್ಧದಲ್ಲಿ ನೇರವಾಗಿ ಭಾಗವಹಿಸಿ ಹೋರಾಡಿದ ಪ್ರತ್ಯಕ್ಷದರ್ಶಿಯ ಒಂದು ವೀರಗಾಥೆ.*

*ಇಟಲಿ ದೇಶದ ಪ್ರಾಚೀನ ಮಹಾಕವಿ ವರ್ಜಿಲನ ( ಕ್ರಿ.ಪೂ. ೭೦ ರಿಂದ ಕ್ರಿ. ಪೂ. ೧೯ ) ಈನಿಯಡ್ ಮಹಾಕಾವ್ಯದ ಎರಡನೆಯ ಕಾಂಡದ ಸಂಕ್ಷಿಪ್ತ ಅನುವಾದ.*

ಒಂಬತ್ತು ವರ್ಷಗಳು ಕಳೆದರೂ ಕೊನೆಗಾಣದ ಯುದ್ಧದಿಂದ ಅಪಾರ ಕಷ್ಟ ನಷ್ಟ ನೋವು ಸಾವು ಅನುಭವಿಸಿ ಬಳಲಿ ಬೇಸತ್ತು ಗ್ರೀಕರು ಕೊನೆಗೆ ಮಿನರ್ವ ದೇವತೆಯು ನೀಡಿದ ಸ್ಫೂರ್ತಿಯಿಂದ, ತಮ್ಮ ಉದ್ದೇಶ ಸಾಧನೆಗಾಗಿ, ಮರದಲ್ಲಿ ಒಂದು ಬೃಹದಾಕಾರದ ಕುದುರೆಯನ್ನು ಮಾಡಿದರು. ಅವರು ಟ್ರಾಯ್‌ನಗರದ ಕೋಟೆಗೆ ಮುತ್ತಿಗೆ ಹಾಕಿ ಒಂಬತ್ತು ವರ್ಷಗಳಿಗೂ ಮೀರಿತ್ತು. ಈಗ ತಾವು ಸುಖವಾಗಿ ಊರು ತಲಪುವಂತಾಗಲಿ ಎಂಬ ನೆವ ಒಡ್ಡಿ

ಮರದ ಕುದುರೆಯನ್ನು ಮಾಡಿ, ಮಿನರ್ವದೇವತೆಗೆ ಅರ್ಪಿಸಿದ್ದರು. ಆ ಕುದುರೆಯ ಉದರ ಪ್ರದೇಶ ಟೊಳ್ಳಾಗಿದ್ದು, ಅದರಲ್ಲಿ ಆರಿಸಿದ ಗ್ರೀಕ್ ವೀರರು ತಮ್ಮ ಅಸ್ತ್ರ ಶಸ್ತ್ರಗಳೊಂದಿಗೆ ಅಡಗಿ ಕುಳಿತಿದ್ದರು ಎಂದು ನಮಗೆ ಆಮೇಲೆ ತಿಳಿದುಬಂದಿತು.

ಟ್ರಾಯ್‌ನಗರಕ್ಕೆ ಕಣ್ಣಳತೆಯ ದೂರದಲ್ಲಿ ಟೆನಿಡೋಸ್ ಎಂಬ ದ್ವೀಪವಿದೆ. ಪ್ರಯಾಮ್ ದೊರೆ ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ ಆ ದ್ವೀಪ ಸಂಪತ್ಸಮೃದ್ಧವಾಗಿ ಒಳ್ಳೆ ಹೆಸರುವಾಸಿಯಾಗಿತ್ತು. ಈಗ ಎಲ್ಲ ಹಾಳಾಗಿದೆ. ಗ್ರೀಕರು ತಮ್ಮ ಹಡಗು ಪಡೆ ತೆಗೆದುಕೊಂಡು ಆ ದ್ವೀಪದವರೆಗೂ ಹೋಗಿ ಅಲ್ಲಿ ಅಡಗಿಕೊಂಡರು. ಅನುಕೂಲವಾದ ಮಾರುತ ಬೀಸಿ ಅವರು ತಮ್ಮ ದೇಶಕ್ಕೆ ಹಿಂದಿರುಗಿ ಹೋದರು ಎಂದೇ ನಾವು ಎಣಿಸಿದೆವು. ಇತ್ತ ಸಮಸ್ತ ಟ್ರೋಜನರೂ ತಮ್ಮ ದೀರ್ಘಕಾಲದ ಕಷ್ಟ ಕಳೆಯಿತು ಎಂದು ನಿರಾಳವಾಗಿ ಉಸಿರುಬಿಡುತ್ತ, ಯುದ್ಧ ಅಲ್ಲಿಗೇ ಮುಗಿಯಿತು ಎಂದು ತಿಳಿದು ಕೋಟೆಯ ಬಾಗಿಲುಗಳನ್ನೆಲ್ಲ ಹಾರುಹೊಡೆದರು. ಸಮುದ್ರದ ತೀರದವರೆಗೂ ಹೋಗಿ, ಶತ್ರುಗಳು ಪಾಳೆಯ ಎತ್ತಿಹೋಗಿರುವುದನ್ನು ಕಣ್ಣಾರೆಕಂಡು ಹರ್ಷಿಸಿದರು. ಇಲ್ಲಿ ಡೋಲೋಪಿಯನರ ಸೇನೆಯಿತ್ತು, ಇಲ್ಲಿ ಅಕಿಲೀಸನ ಗುಡಾರವಿತ್ತು, ಇಲ್ಲಿ ಏಜಾಕ್ಸ್ ಪಾಳೆಯ ಹಾಕಿದ್ದ, ಇಲ್ಲಿ ಹಡಗುಗಳನ್ನು ಎಳೆದು ನಿಲ್ಲಿಸಿದ್ದರು ಎಂದು ಗುರುತಿಸುತ್ತ ಅವು ಖಾಲಿಯಾದುದಕ್ಕೆ ನಲಿದಾಡಿದರು. ನಮ್ಮಲ್ಲಿ ಕೆಲವರು ಆ ಬೃಹದಾಕಾರದ ಕುದುರೆಯ ಸುತ್ತ ನಿಂತುಕೊಂಡು ಅದರ ಎತ್ತರ ಗಾತ್ರವನ್ನು ವಿಸ್ಮಯದಿಂದ ನೋಡತೊಡಗಿದರು. ಅವರಲ್ಲೊಬ್ಬ ಅದನ್ನು ಕೋಟೆಯೊಳಗೆ ತೆಗೆದುಕೊಂಡು ಹೋಗಬೇಕೆಂದರೆ, ಬೇರೆ ಕೆಲವರು ವಿರೋಧಿಸುತ್ತ, ಅದನ್ನು ಸಮುದ್ರಕ್ಕೆ ಎತ್ತಿ ಎಸೆಯಬೇಕು ಅಥವಾ ಅದಕ್ಕೆ ಬೆಂಕಿಹಾಕಿ ಸುಡಬೇಕು ಇಲ್ಲವೇ ಅದರ ಹೊಟ್ಟೆ ಬಗೆದು ಒಳಗೇನಿದೆ ನೋಡಬೇಕು ಎಂದು ಪ್ರತಿಭಟಿಸಿದರು. ಜನ ಪಕ್ಷವಹಿಸಿ ಆ ಕಡೆ ಈ ಕಡೆ ಮಾತಾಡತೊಡಗಿದರು.

ಆಗ ಕೋಟೆಯ ಗೋಡೆಯ ಮೇಲಿದ್ದ ಲವೋಕೂನನು ಜನರ ಒಂದು ದೊಡ್ಡ ಗುಂಪಿನೊಂದಿಗೆ ಕೂಡಿ ದೂರದಿಂದಲೇ ಕೂಗಿಕೊಳ್ಳುತ್ತ ಓಡಿಬಂದ:

'ನತದೃಷ್ಟ ಟ್ರೋಜನರೇ, ಇದೆಂತಹ ಹುಚ್ಚು ನಿಮ್ಮದು? ಶತ್ರುಗಳು ಯುದ್ಧ ನಿಲ್ಲಿಸಿ ಹೊರಟುಹೋದರು ಎಂದು ತಿಳಿದಿರಾ? ಅಥವಾ ಗ್ರೀಕರು ಯಾವುದೇ ಕುತಂತ್ರವಿಲ್ಲದೆ ಇಂತಹ ಒಂದು ಕಾಣಿಕೆ ಸಲ್ಲಿಸುತ್ತಾರೆ ಎಂದುಕೊಂಡಿರಾ? ಯೂಲಿಸಿಸ್ಸನ ಬಗೆಗೆ ಇಷ್ಟೇ ನಿಮಗೆ ತಿಳಿದಿರುವುದು? ಈ ಮರದ ಕುದುರೆಯ ಹೊಟ್ಟೆಯೊಳಗೆ ಗ್ರೀಕ್ ವೀರರು ಅಡಗಿ ಕುಳಿತಿದ್ದು, ಆ ಎತ್ತರದಿಂದ ಗೂಢಚಾರಿಕೆ ಮಾಡಿ ಅಲ್ಲಿಂದ ಕೆಳಗಿಳಿದು ಬಂದು ನಗರವನ್ನು ಮುತ್ತುತ್ತಾರೆ ಅಥವಾ ನಮ್ಮ ಕೋಟೆಯನ್ನು ಒಡೆಯಲು ಅವರು ಹೂಡಿರುವ ಒಂದು ಯಂತ್ರವಿದು. ಇಲ್ಲವೆ ಇದರಲ್ಲಿ ಇನ್ನೇನೋ ಒಂದು ವಂಚನೆ ಅಡಗಿದೆ. ಟ್ರಾಯ್‌ನಗರದ ಪ್ರಜೆಗಳೇ, ಈ ಕುದುರೆಯ ಮೇಲೆ ವಿಶ್ವಾಸವಿಡಬೇಡಿ. ಅದು ಏನಾದರೂ ಆಗಿರಲಿ, ಗ್ರೀಕರು ಎಂತಹ ಅಪೂರ್ವವಾದ ಕಾಣಿಕೊಡಬಂದರೂ ನಂಬಬೇಡಿ' ಎಂದು ಹೇಳುತ್ತ ತನ್ನ ಈಟಿಯನ್ನು ಬಲವಾಗಿ ತೂಗಿ

ಕುದುರೆಯ ಹೊಟ್ಟೆಗೆ ಹೊಡೆದ. ಅದು ಅದರ ಪಕ್ಕೆಗೆ ನಾಟಿಕೊಂಡು ಕುದುರೆಯ ಹೊಟ್ಟೆ ಕಂಪಿಸುತ್ತ ಒಳಗೆ ಹೊಳಲುಗೊಟ್ಟಿತು. ದೈವಕೃಪೆ ನಮ್ಮ ಮೇಲಿದ್ದ ಪಕ್ಷದಲ್ಲಿ ನಾವೆಲ್ಲ ಆಗಲೇ ಕತ್ತಿ ಹಿಡಿದು, ಅವಿತು ಕುಳಿತಿದ್ದ ಶತ್ರುಗಳನ್ನು ಹಿಡಿಯಬಹುದಾಗಿತ್ತು, ಹಾಗೆ ಮಾಡಿದ್ದರೆ ಟ್ರಾಯ್‌ಕೋಟೆ ಭದ್ರವಾಗಿ ಉಳಿದಿರುತ್ತಿತ್ತು!

ಈ ನಡುವೆ ಕೆಲವು ಕುರಿಗಾಹಿಗಳು ಒಬ್ಬ ಮನುಷ್ಯನನ್ನು ಸೆರೆಹಿಡಿದು, ಅವನ ಕೈಗಳನ್ನು ಹಿಂಬದಿಗೆ ತಿರುಗಿಸಿ ಕಟ್ಟಿ ಜೋರಾಗಿ ಗಲಭೆ ಮಾಡುತ್ತ ದೊರೆ ಪ್ರಯಾಮನ ಮುಂದೆ ಎಳೆದು ತಂದು ನಿಲ್ಲಿಸಿದರು. ಅವನು ಬೇಕಾಗಿಯೇ ಇವರ ಕೈಗೆ ಸಿಕ್ಕಿ ಬಿದ್ದಿದ್ದ. ಸಮಯ ಸಾಧಿಸಿ ಗ್ರೀಕರನ್ನು ಕೋಟೆಯೊಳಗೆ ಬಿಟ್ಟುಕೊಳ್ಳುವುದು ಅಥವಾ ಆ ಸಾಹಸದಲ್ಲಿ ತನ್ನ ಪ್ರಾಣ ಒಪ್ಪಿಸುವುದು ಎಂಬ ಧೈರ್ಯದಿಂದ ಬಂದಿದ್ದ. ಆಗ ಎಲ್ಲ ಟ್ರೋಜನರೂ ಅವನನ್ನು ಮನಸ್ವೀ ನಿಂದಿಸುತ್ತ ಹತ್ತಿರ ಹತ್ತಿರ ಬಂದು ಸುತ್ತುವರಿದು ನಿಂತರು. ಆ ವ್ಯಕ್ತಿಯು ಸುತ್ತಲೂ ಇದ್ದ ಜನರನ್ನು ಭಯವಿಹ್ವಲ ದೃಷ್ಟಿಯಿಂದ ನೋಡುತ್ತ 'ಅಯ್ಯೋ ! ನನಗಿನ್ನು ಆಶ್ರಯ ಎಲ್ಲಿ? ಗ್ರೀಕರೂ ನನಗೆ ರಕ್ಷಣೆ ಕೊಡಲಿಲ್ಲ. ಇನ್ನು ಈ ಟ್ರೋಜನರೂ ಸೇಡಿನಿಂದ ನನ್ನ ವಿರುದ್ಧ ಕತ್ತಿ ಹಿರಿದು ನಿಂತಿದ್ದಾರೆ!' ಎಂದು ಅಳವಿಕೊಂಡ. ಅವನ ಆರ್ತಪ್ರಲಾಪವನ್ನು ಕಂಡು ನಮ್ಮೆದೆ ಕರಗಿತು. ಏನು ಸಂಗತಿ ತಿಳಿಸುವಂತೆ ನಾವು ಅವನನ್ನು ಕೇಳಿದೆವು. ಅವನ ತಂದೆ ತಾಯಿ ಯಾರು? ಅವನ ಕಸುಬೇನು? ಅವನನ್ನು ಖೈದಿಯಂತೆ ಏಕೆ ಹಿಡಿದು ಕಟ್ಟಿ ಹಾಕಿದ್ದಾರೆ? ಎಂದು ಪ್ರಶ್ನಿಸಿದೆವು. 'ಎಲ್ಲವನ್ನೂ ಹೇಳುತ್ತೇನೆ' ಎಂದು ಅವನು ಉಸಿರನ್ನು ನುಂಗುತ್ತ ಹೇಳತೊಡಗಿದ. 'ಇದರಿಂದ ಏನು ಪರಿಣಾಮವಾದರೂ ಆಗಲಿ, ನಾನು ಸುಳ್ಳು ಹೇಳುವುದಿಲ್ಲ, ತಿಳಿಯಿರಿ, ನಾನೊಬ್ಬ ಗ್ರೀಕ. ನನ್ನ ಹೆಸರು ಸಿನೋನ್ ಎಂದು. ನೀವು ನಮ್ಮ ಕಡೆಯ ಪಲಮಿಡೀಸನ ಹೆಸರು ಕೇಳಿರಬಹುದು, ಅವನು ಬಹಳ ಬುದ್ಧಿವಂತ. ನಾನು ಅವನ ಸಂಬಂಧಿ ಮತ್ತು ಆಪ್ತಮಿತ್ರ. ನಾನು ಚಿಕ್ಕವಯಸ್ಸಿನಲ್ಲಿಯೇ ಸೈನ್ಯಕ್ಕೆ ಸೇರಿದೆ. ನಾನು ದೊಡ್ಡ ಕುಟುಂಬದಿಂದ ಬಂದವನು. ಸೈನ್ಯದಲ್ಲಿ ಮೇಲ್ದರ್ಜೆಯ ಅಧಿಕಾರಿಯಾಗಿದ್ದು ಎಲ್ಲರ ಗೌರವಾದರಕ್ಕೆ ಪಾತ್ರನಾಗಿದ್ದೆ. ಆಮೇಲೊಂದು ದಿನ ಆ ಕುತಂತ್ರಿ ಯೂಲಿಸಿಸ್ಸನು ಪಲಮಿಡೀಸನ ಮೇಲೆ ಮತ್ಸರ ತಾಳಿ ಉಪಾಯಾಂತರಗಳಿಂದ ಅವನನ್ನು ಕೊಲ್ಲಿಸಿದನಲ್ಲ – ಗ್ರೀಕರು ಅವನನ್ನು ಕೊಂದು ಆಮೇಲೆ ಪಶ್ಚಾತ್ತಾಪಪಟ್ಟರು, ಆ ಕಥೆಯೆಲ್ಲ ನಿಮಗೆ ಗೊತ್ತಿದೆಯಲ್ಲ, ಇರಲಿ ಅಂದಿನಿಂದ ನನ್ನ ಸ್ಥಾನ ಗೌರವಗಳಿಗೂ ಚ್ಯುತಿ ಬಂದಿತು. ನನ್ನ ಸ್ನೇಹಿತನ ವಧೆಗಾಗಿ ಮರುಗುತ್ತ, ನಾನು ಊರಿಗೆ ಹಿಂದಿರುಗಿ ಹೋದ ಮೇಲೆ ಈ ಅನ್ಯಾಯದ ಸೇಡು ತೀರಿಸಿಕೊಳ್ಳುತ್ತೇನೆ ಎಂದು ಗಟ್ಟಿಯಾಗಿಯೇ ನುಡಿದೆ. ಆ ಮಾತು ಯೂಲಿಸಿಸ್ಸನ ಕಿವಿಗೆ ಬಿದ್ದಿತು. ನೋಡಿ, ಅಂದಿನಿಂದ ನನ್ನ ಕಷ್ಟ ಪ್ರಾರಂಭವಾಯಿತು. ಅವನು ಪ್ರತಿದಿನವೂ ನನ್ನ ಮೇಲೆ ಒಂದಲ್ಲ ಒಂದು ಆರೋಪ ಹೊರಿಸಿ ಹೆದರಿಸುತ್ತ ನನ್ನನ್ನು ಕೊನೆಗಾಣಿಸಲು ಸಂಚು ಮಾಡತೊಡಗಿದ. ಆಮೇಲೆ ಅವನು ಕಣಿಯ ಕಾಲ್ಕಾಸನ ನೆರವು ಪಡೆದು – ಅಯ್ಯೋ, ಆ ಕಥೆಯನ್ನೆಲ್ಲ ಏಕೆ ಹೇಳಲಿ? ನಿಮಗೂ ಸುಮ್ಮನೇ ಕಾಲಹರಣ. ಎಲ್ಲ ಗ್ರೀಕರೂ ಒಂದೇ ಬಗೆಯ ವಂಚಕರು ಎಂದು ನೀವು ತಿಳಿಯುವುದಾದರೆ ನನ್ನ ಮೇಲೆ ಈಗಲೇ ಪ್ರತೀಕಾರ ತೀರಿಸಿಕೊಳ್ಳಿರಿ. ಇದರಿಂದ ಆ ಯೂಲಿಸಿಸ್‌ಗೆ ತುಂಬ ಸಂತೋಷವಾಗುತ್ತದೆ.'

''ಅವನ ಮಾತುಗಳು ನಮ್ಮ ಕುತೂಹಲವನ್ನು ಕೆರಳಿಸಿದುವು. ಗ್ರೀಕರು ಎಂತಹ ದ್ರೋಹ

ಬಗೆಯಬಹುದು ಎಂಬ ಕಲ್ಪನೆಯಿಲ್ಲದೆ ನಾವು ಅವನ ಕಥೆಯನ್ನು ಆಮೂಲಾಗ್ರವಾಗಿ ತಿಳಿಯಬಯಸಿದೆವು. ಅವನು ದುಃಖದಿಂದ ನೊಂದುಕೊಂಡವನಂತೆ ಬಿಕ್ಕುತ್ತಲೇ ತನ್ನ ಕಥೆಯನ್ನು ಮುಂದುವರಿಸಿ ಹೇಳತೊಡಗಿದ. 'ಟ್ರಾಯ್‌ನಗರಕ್ಕೆ ಮುತ್ತಿಗೆ ಹಾಕಿದ ಈ ಒಂಬತ್ತು ವರ್ಷಗಳ ಕಾಲಾವಧಿಯಲ್ಲಿ ಗ್ರೀಕರು ಯಾವ ಗೆಲವನ್ನೂ ಸಾಧಿಸಲಾಗದೆ ತಮ್ಮ ಊರಿಗೆ ವಾಪಸು ಹೋಗುವ ಯೋಚನೆಯಲ್ಲಿದ್ದರು. ಆದರೆ ಅನುಕೂಲವಾದ ಮಾರುತ ಬೀಸಲಿಲ್ಲ. ಅನಂತರ ಈ ಮರದ ಕುದುರೆಯು ನಿರ್ಮಾಣವಾಯಿತು. ಆಗ ಭೂಮಿಯೆಲ್ಲ ನಡಗುವಂತೆ ಆಕಾಶ ಗುಡುಗಾಡಿತು. ಇದೇನು ಅಪಶಕುನವೋ ಎಂದು ಭಯಗೊಂಡ ನಾವು ಅಪಾಲೋದೇವ ವಾಣಿಯನ್ನು ಕೇಳಿಬರಲು ಯೂರಿ ಕೈಲಸನನ್ನು ಕಳಿಸಿಕೊಟ್ಟೆವು. ಅವನು ಹಿಂದಿರುಗಿ ಬಂದು ಗ್ರೀಕ್ ನಾಯಕರನ್ನು ಕುರಿತು ಹೇಳಿದ : ನೀವು ಗ್ರೀಸ್ ದೇಶದಿಂದ ಟ್ರಾಯ್‌ನಗರಕ್ಕೆ ದಂಡೆತ್ತಿ ಹೊರಟಾಗಲೂ ವಾಯುದೇವತೆಗಳನ್ನು ತೃಪ್ತಿಪಡಿಸಲು ನರಬಲಿಯನ್ನು - ಒಬ್ಬ ಹೆಣ್ಣುಮಗಳ ರಕ್ತಬಲಿಯನ್ನು ಕೊಟ್ಟಿರಿ. ಈಗ ಇಲ್ಲಿಂದ ವಾಪಸು ಹೋಗುವಾಗಲೂ ನೀವು ಒಬ್ಬ ಗ್ರೀಕನನ್ನು ಬಲಿಕೊಟ್ಟು ಸ್ವರ್ಗದ ದೇವತೆಗಳನ್ನು ಒಲಿಸಿಕೊಳ್ಳಬೇಕು. ಆ ಮಾತನ್ನು ಕೇಳುತ್ತಿದ್ದ ಹಾಗೇ ನಮ್ಮವರೆಲ್ಲ ಭಯದಿಂದ ನಡುಗಿ ಹೋದರು. ನಮ್ಮಲ್ಲಿ ಯಾರ ಬಲಿಯಾಗುತ್ತದೊ? ಅಪಾಲೋದೇವತೆಯು ಯಾರನ್ನು ಬಲಿ ತೆಗೆದುಕೊಳ್ಳುತ್ತಾನೊ? - ಎಂದು ಎಲ್ಲರೂ ಚಿಂತಿತರಾದರು. ಆಗ ಯೂಲಿಸಿಸ್ಸನು ಕಣಿಯ ಕಾಲ್ಕಸನನ್ನು ಹಿಡಿದು ದೇವವಾಣಿಯ ಅರ್ಥವೇನು? ತಿಳಿಯ ಹೇಳು ಎಂದು ಗಟ್ಟಿಸಿ ಕೇಳಿದ. ಆಗ ನನ್ನ ಹಿತೈಷಿಗಳು ಯೂಲಿಸಿಸ್ಸನ ಬಗೆಗೆ ಎಚ್ಚರಿಕೆಯಿಂದಿರುವಂತೆ ನನಗೆ ತಿವಿದು ಹೇಳಿದರು. ಅಲ್ಲಿಂದ ಹತ್ತು ದಿನಗಳವರೆಗೆ ಕಾಲ್ಕಾಸನು ತುಟಿಬಿಗಿದುಕೊಂಡು ಮೌನವಾಗಿ ತನ್ನ ಬಿಡಾರದಲ್ಲಿಯೇ ಇದ್ದುಬಿಟ್ಟ. ಆಮೇಲೆ ಯೂಲಿಸಿಸ್ಸನ ಚಿತಾವಣೆಗೆ ಬಲಿಯಾಗಿ ಅವನು ಹನ್ನೊಂದನೆಯ ದಿನ ಬಾಯಿಬಿಟ್ಟು ನನ್ನ ಹೆಸರು ಹೇಳಿ, ನನ್ನನ್ನು ಬಲಿಕೊಡಬೇಕು ಎಂದು ದೇವತೆ ಕೇಳುತ್ತಿದೆ ಎಂದು ಹೇಳಿದ. ಸಧ್ಯ, ತಮ್ಮ ಹೆಸರನ್ನು ಹೇಳಲಿಲ್ಲವಲ್ಲ ಎಂದು ಉಳಿದವರೆಲ್ಲ ಒಳಗೊಳಗೇ ಸಂತೋಷಪಟ್ಟು, ಕಾಲ್ಕಾಸನ ಮಾತಿಗೆ ತಮ್ಮ ಪೂರ್ಣ ಸಮ್ಮತಿಯನ್ನು ಕೊಟ್ಟರು. ಅದರಂತೆ ನನ್ನನ್ನು ಬಲಿಕೊಡುವ ದಿನವೂ ಹತ್ತಿರ ಬಂದಿತು. ಅದಕ್ಕೆ ಬೇಕಾದ ಎಲ್ಲ ಏರ್ಪಾಡುಗಳೂ ಸಿದ್ಧವಾದವು. ಆದರೆ ಅದರ ಹಿಂದಿನ ರಾತ್ರಿಯೇ ನಾನು ಕಟ್ಟಡಗಳನ್ನು ಹರಿದುಕೊಂಡು ಮೆಲ್ಲಗೆ ತಪ್ಪಿಸಿಕೊಂಡು ಅಲ್ಲೊಂದು ಜವುಗು ಪ್ರದೇಶದಲ್ಲಿ ಜೊಂಡುಗಳ ನಡುವೆ ಅವಿತು ಕುಳಿತೆ. ಈ ನಡುವೆ, ಅದು ಹೇಗಾಯಿತೊ ಕಾಣೆ, ಅವರೆಲ್ಲ ಹೊರಟು ಹೋಗಿದ್ದಾರೆ. ಅಯ್ಯೊ! ನಾನು ನನ್ನ ದೇಶವನ್ನಿನ್ನು ಕಾಣುವ ಹಾಗಿಲ್ಲ. ನನ್ನ ತಂದೆಯನ್ನಾಗಲಿ, ಮಕ್ಕಳನ್ನಾಗಲಿ ಕಾಣಲಾರೆ. ನಾನು ಹೀಗೆ ತಪ್ಪಿಸಿಕೊಂಡೆನಲ್ಲ ಎಂಬ ಸಿಟ್ಟಿನಿಂದ ಅವರು ಊರಿಗೆ ಹೋದ ಮೇಲೆ ನನ್ನ ತಂದೆಯನ್ನೂ ಮಕ್ಕಳನ್ನೂ ಕೊಂದು ಸೇಡು ತೀರಿಸಿಕೊಳ್ಳುತ್ತಾರೆ. ಅಯ್ಯೊ! ಇಷ್ಟೆಲ್ಲ ದುಃಖವನ್ನು ನಾನು ಸಹಿಸಲಾರೆ. ನಾನು ಸತ್ಯವನ್ನೇ ಹೇಳುತ್ತಿದ್ದೇನೆ. ಸತ್ಯಕ್ಕೆ ಬೆಲೆ ಇದ್ದುದೇ ಆದರೆ, ಸ್ವಾಮಿ ಟ್ರೋಜನರೇ, ನೀವು ನನ್ನ ಮೇಲೆ ಕರುಣೆ ತೋರಿ ಕಾಪಾಡಿರಿ?

ಅವನ ಅಳಲಿನ ಕಥೆ ನಮ್ಮನ್ನು ಮರುಳುಮಾಡಿತು. ಅವನ ಕಪಟದ ಮಾತುಗಳು ಅವನ ಪ್ರಾಣ ಉಳಿಸಿದವು. ಅವನ ಕೈಕಾಲಿಗೆ ಬಿಗಿದು ಕಟ್ಟಿದ ಸರಪಳಿಯನ್ನು ಬಿಚ್ಚಿ ಬಿಡುಗಡೆ ಮಾಡುವಂತೆ ಪ್ರಯಾಮ್ ದೊರೆಯೇ ಅಪ್ಪಣೆ ಮಾಡಿದ. 'ಅಯ್ಯಾ ನೀನು ಯಾರೇ ಆಗಿರು, ಈ ಕ್ಷಣದಿಂದ ಆ

ಗ್ರೀಕರನ್ನು ಮರೆತುಬಿಡು. ಇಂದಿನಿಂದ ನೀನು ನಮ್ಮವನಾದೆ. ಈಗ ನಾನು ಕೇಳಿದ ಪ್ರಶ್ನೆಗಳಿಗೆ ಪ್ರಾಮಾಣಿಕವಾಗಿ ಉತ್ತರ ಹೇಳು. ಗ್ರೀಕರು ಈ ಪರ್ವತಗಾತ್ರದ ಕುದುರೆಯನ್ನೇಕೆ ಮಾಡಿದರು? ಇದು ಯಾರ ಯೋಚನೆ? ಏನಿದರ ಉದ್ದೇಶ? ಇದು ಯಾವುದಾದರೂ ದೇವರಿಗೆ ಬಿಟ್ಟಿದ್ದೆ? ಅಥವಾ ಇದೇನಾದರೂ ನಮ್ಮ ಕೋಟೆಯನ್ನು ಗೆಲ್ಲಲು ಹೂಡಿದ ಯಂತ್ರವೆ?'

ಅದಕ್ಕನುಗುಣವಾಗಿ ಸಿನೋನನು ಕೈಬಾಯಿ ಆಡಿಸಿ ನಾಟಕವಾಡುತ್ತ ''ನನ್ನ ಮಾತಿಗೆ ದೇವತೆಗಳೇ ಸಾಕ್ಷಿ. ಇಂದಿನಿಂದ ನಾನು ಗ್ರೀಕರೊಡನಿದ್ದ ನನ್ನ ಸಂಬಂಧವನ್ನು ಕಳಚಿಕೊಂಡೆ. ಈಗ ಯಾವ ಮುಲಾಜೂ ಇಲ್ಲದೆ ನಾನು ಅವರು ಹೂಡಿದ ಕುತಂತ್ರಗಳನ್ನೆಲ್ಲ ಬಯಲು ಮಾಡುತ್ತೇನೆ, ಕೇಳಿ. ತಮಗೆ ಮಿನರ್ವದೇವತೆಯ ಸಹಾಯವಿದೆಯೆಂದೇ ಅವರು ಧೈರ್ಯವಾಗಿ ಯುದ್ಧ ಮಾಡುತ್ತಿದ್ದರು. ಆದರೆ ಡಯಮಿಡೀಸ್ ಮತ್ತು ಯೂಲಿಸಿಸ್ಸರು ನಿಮ್ಮ ಕೋಟೆಯೊಳಗಿರುವ ಮಿನರ್ವದೇವತೆಯ ಮಂದಿರಕ್ಕೆ ಕದ್ದು ಬಂದು, ಕಾವಲುಗಾರರನ್ನು ಕೊಂದು, ದೇವಿಯ ವಿಗ್ರಹವನ್ನು ಕದ್ದುಕೊಂಡು ಹೋದರಲ್ಲ, ಅಂದಿನಿಂದ ಗ್ರೀಕರು ಮಿನರ್ವಳ ಅನುಗ್ರಹವನ್ನು ಕಳೆದುಕೊಂಡರು. ಆ ವಿಗ್ರಹವನ್ನು ತಂದು ನಮ್ಮ ಪಾಳೆಯದಲ್ಲಿ ಇಡುತ್ತಿದ್ದ ಹಾಗೇ, ಆ ಮೂರ್ತಿಯ ಕಣ್ಣುಗಳಿಂದ ಬೆಂಕಿಯ ಜ್ವಾಲೆಯೇ ಹೊರಟಿತು. ಅದರ ಮೈಮೇಲೆ ಬೆವರುಕ್ಕಿ ಹರಿಯಿತು. ಅದು ತಾನು ಇದ್ದಲ್ಲಿಂದ ಈಟಿ ಗುರಾಣಿಗಳ ಸಮೇತ ಮೂರು ಸಲ ನೆಗೆದು ಹಾರಿತು. ಅದನ್ನು ಕಂಡ ಕೂಡಲೇ 'ಕಾಲ್ಕಾಸನು ಗ್ರೀಕ್ ನಾಯಕರನ್ನು ಕುರಿತು, ನೀವೆಲ್ಲ ಈ ಕೂಡಲೇ ಹಡಗು ಹತ್ತಿ ಸಮುದ್ರಯಾನ ಕೈಗೊಳ್ಳಿ. ನೀವೀಗ ಖಂಡಿತ ಟ್ರಾಯ್‌ನಗರವನ್ನು ವಶಪಡಿಸಿಕೊಳ್ಳಲಾರಿರಿ. ಮುಂದೆ ಶುಭಶಕುನಗಳು ಕೂಡಿ ಬಂದಾಗ ಮತ್ತೊಮ್ಮೆ ಇಲ್ಲಿಗೆ ಬರುವಿರಂತೆ ಎಂದು ಹೇಳಿದ. ಅದರಂತೆ ಗ್ರೀಕರು ಪಾಳೆಯ ತೆಗೆದು ಊರಿಗೆ ಹೊರಟುಹೋದರು. ಮುಂದೆ ದೊಡ್ಡ ಸೈನ್ಯ ಕೂಡಿಸಿಕೊಂಡು ಮತ್ತೆ ಬರುತ್ತಾರೆ. ಕಣ್ಣಿಗೆ ಕಾಣದ ಹಾಗೆ ಬಂದು ನಿಮ್ಮ ಮೇಲೆ ಆಕ್ರಮಣ ಮಾಡುತ್ತಾರೆ. ಇನ್ನು ಈ ಮರದ ಕುದುರೆಯ ವಿಷಯ : ನಿಮ್ಮ ಕೋಟೆಯೊಳಗಿನಿಂದ ಮಿನರ್ವಳ ವಿಗ್ರಹವನ್ನು ಕದ್ದುಕೊಂಡು ಹೋದರಲ್ಲ, ಆ ತಪ್ಪಿಗೆ ದಂಡಪರಿಹಾರವಾಗಿ ಈ ಕುದುರೆಯನ್ನು ಮಾಡಿ ದೇವತೆಗೆ ಅರ್ಪಿಸಿದರು. ಇದನ್ನು ಇಷ್ಟು ಎತ್ತರ ಗಾತ್ರವಾಗಿ ಮಾಡುವಂತೆ ಕಾಲ್ಕಸನೇ ಸೂಚಿಸಿದ್ದು. ಇದಕ್ಕೂ ಅವರ ಕುತಂತ್ರ ಬುದ್ಧಿಯೇ ಕಾರಣ. ಈ ಕುದುರೆಯನ್ನು ನೀವು ಕೋಟೆಯೊಳಗೆ ಸಾಗಿಸಿ ಇದರ ಪೂಜೆಗೆ ಅವಕಾಶ ಕಲ್ಪಿಸದಿರಲಿ ಎಂಬುದೇ ಅವರ ಉದ್ದೇಶ. ಮಿನರ್ವದೇವತೆಗೆ ಮೀಸಲಾಗಿ ಅರ್ಪಿಸಿದ ಈ ಕುದುರೆಯನ್ನು ನೀವು ಉದಾಸೀನ ಮಾಡಿ ಇಲ್ಲಿಯೇ ಬಿಟ್ಟರೆ ನಿಮ್ಮ ಸರ್ವನಾಶವಾಗುತ್ತದೆ. ಒಂದು ವೇಳೆ ನೀವು ಇದನ್ನು ಕೋಟೆಯೊಳಗೆ ತೆಗೆದುಕೊಂಡು ಹೋಗಿ ಇದರ ಪೂಜೆ ಪುನಸ್ಕಾರ ಪ್ರಾರ್ಥನೆಗೆ ಅವಕಾಶ ಮಾಡಿಕೊಟ್ಟರೆ ದೇವತೆಯ ಅನುಗ್ರಹ ನಿಮ್ಮ ಮೇಲೆ ತಿರುಗಿ, ಗ್ರೀಕರ ಸರ್ವನಾಶವಾಗುತ್ತದೆ. ಹೀಗೆಂದು ಹೇಳಿ ಕಾಲ್ಕಾಸನೇ ಎಚ್ಚರಿಕೆ ಕೊಟ್ಟ.' 'ಸಿನೋನನು ಹೀಗೆ ಹೇಳಿ ನಮ್ಮ ಬುದ್ಧಿಗೆ ಮಂಕು ಕವಿಸಿದ. ಯುದ್ಧದಲ್ಲಿ ಟೈಡಿಯಸನ ಮಗ ಡಯಮಿಡೀಸನು ಮೆರೆದ ಸಾಹಸ, ಲ್ಯಾರಿಸ್ಸ ನಗರದ ಅಕಲೀಸನು ತೋರಿದ ಪರಾಕ್ರಮ, ಹತ್ತುವರ್ಷಗಳ ಕಾಲ ನಡೆದ ಸಮರ, ಸಾವಿರ ಹಡಗುಪಡೆ ಮಾಡದ ಕೆಲಸವನ್ನು ಗ್ರೀಕರು ಫರ್ ಮರದ ಹಲಗೆಗಳಿಂದ ಮಾಡಿದ ಒಂದು ಕುದುರೆಯ ತಂತ್ರದಿಂದ ಸಾಧಿಸಿದರು!

''ಇದರ ಜೊತೆಗೆ ನಮ್ಮನ್ನು ಮರುಳು ಮಾಡುವಂತೆ ಇನ್ನೊಂದು ಭಾರೀ ಅನಾಹುತ ನಡೆದು ಹೋಯಿತು. ನೆಪ್ಚೂನ್ ದೇವತೆಯ ಪೂಜಾರಿಯಾಗಿ ನೇಮಿತನಾದ ಲವೋಕೂನನು ಸಮುದ್ರತೀರದಲ್ಲಿದ್ದ ಬಲಿಗಂಬದ ಬಳಿಗೆ ತೆರಳಿ, ದೇವತೆಯ ಅನುಗ್ರಹ ಸಂಪಾದನೆಗಾಗಿ ಗೂಳಿಯನ್ನು ಬಲಿಗೊಡುತ್ತಿದ್ದ. ಆಗ ಸಮುದ್ರಗರ್ಭದಿಂದ ಮೇಲೆದ್ದ ಎರಡು ಭಾರೀ ಹಾವುಗಳು ಟೆನಿಡೊಸ್ ದ್ವೀಪದ ಕಡೆಯಿಂದ ಕಡಲ ತೀರದ ಕಡೆಗೆ ಈಜಿಕೊಂಡು ಬಂದುವು. ಅವುಗಳನ್ನು ಕಂಡು ನಾವು ಭಯಗ್ರಸ್ತರಾಗಿ ದೂರ ಸರಿದಂತೆ, ಅವು ನೇರವಾಗಿ ಆ ಬಲಿಗಂಬದ ಬಳಿಗೆ ಹೋಗಿ, ಲವೋಕೂನನ ಇಬ್ಬರು ಮಕ್ಕಳನ್ನು ಹಿಡಿದು ನುಂಗತೊಡಗಿದವು. ಮಕ್ಕಳ ಆರ್ತನಾದ ಕೇಳಿ ಲವೋಕೂನನು ಅವರನ್ನು ಬಿಡಿಸಬೇಕೆಂದು ಆಯುಧ ಹಿಡಿದು ಹತ್ತಿರ ಓಡಿ ಬಂದಾಗ, ಹಾವುಗಳು ಅವನ ಮೈಕೈ ಕಾಲು ಕುತ್ತಿಗೆಗಳಿಗೆ ಬಲವಾಗಿ ಸುತ್ತಿಕೊಂಡು ಮೂಳೆಮುರಿಯುವಂತೆ ಹಿಂಡಿ ಹಾಕಿದುವು. ಅವನು ನೋವು ಮತ್ತು ಭಯದಿಂದ ಗಟ್ಟಿಯಾಗಿ ಕಿರಿಚಿಕೊಳ್ಳುತ್ತ, ಹಾವುಗಳ ಹಿಡಿತದಿಂದ ಬಿಡಿಸಿಕೊಳ್ಳಲು ಹೆಣಗಾಡಿದ. ನೆತ್ತರು ಮತ್ತು ಹಾವುಗಳ ವಿಷ ಅವನ ಮೈಮೇಲೆಲ್ಲ ಸಿಡಿದು ಹರಿಯಿತು. ಅನಂತರ ಆವೆರಡು ಹಾವುಗಳು ಅಲ್ಲಿಂದ ಮೆಲ್ಲಗೆ ಬಿಡಿಸಿಕೊಂಡು ಮಿನರ್ವದೇವತೆಯ ಮಂದಿರಕ್ಕೆ ಹೋಗಿ, ಅಲ್ಲಿ ದೇವತೆಯ ಕಾಲುಗಳ ಬಳಿ ಅವಳ ಗುರಾಣಿಯ ಹತ್ತಿರ ಸುರುಳಿಸುತ್ತಿಕೊಂಡು ತಣ್ಣಗೆ ಮಲಗಿದುವು. ಇತ್ತ ಲವೋಕೂನನು ತನ್ನಿಬ್ಬರ ಮಕ್ಕಳ ಜೊತೆಗೆ ಪ್ರಾಣನೀಗಿದ. ಮಿನರ್ವದೇವತೆಗೆ ಅರ್ಪಿಸಿದ ಪವಿತ್ರವಾದ ಆ ಮರದ ಕುದುರೆಯ ಹೊಟ್ಟೆಗೆ ಅವನು ಈಟಿಯಿಂದ ಹೊಡೆದ ತಪ್ಪಿಗೆ ಅವನಿಗೆ ಈ ರೀತಿ ಶಿಕ್ಷೆಯಾಯಿತು ಎಂದು ಜನ ನಂಬಿದರು. 'ಆ ಕುದುರೆಯನ್ನು ಕೂಡಲೇ ಕೋಟೆಯ ಒಳಗೆ ತನ್ನಿ. ದೇವತೆಗೆ ತಪ್ಪೊಪ್ಪಿಗೆಯ ಪ್ರಾರ್ಥನೆ ಸಲ್ಲಿಸಿ' ಎಂದು ಎಲ್ಲರೂ ಒಕ್ಕೊರಲಿನಿಂದ ಕೂಗಿದರು. ಅನಂತರ ಆ ಕುದುರೆಯ ಕಾಲುಗಳಿಗೆ ಚಕ್ರವನ್ನು ಜೋಡಿಸಿ ಹಗ್ಗಗಳನ್ನು ಕಟ್ಟಿ ಎಳೆದುಕೊಂಡು ಹೋಗಿ ಕೋಟೆಯ ಗೋಡೆಯ ಮೇಲಿಂದ ಎತ್ತಿ ಅದನ್ನು ಒಳಗೆ ಸಾಗಿಸಲಾಯಿತು. ದ್ವಾರದ ಬಳಿ ಅದು ನಾಲ್ಕು ಸಲ ತಡೆದು ನಿಂತಿತು. ನಾಲ್ಕು ಸಲವೂ ಅದರ ಉದರದೊಳಗಿಂದ ಆಯುಧಗಳ ಶಬ್ದವಾಯಿತು. ಆದರೂ ನಾವು ಎಚ್ಚೆತ್ತುಕೊಳ್ಳಲಿಲ್ಲ. ಕೇವಲ ಬುದ್ಧಿಗುರುಡರಂತೆ ಆ ಕುದುರೆಯನ್ನು ಕಷ್ಟಪಟ್ಟು ಎಳೆದು ತಂದು ಊರಿನ ನಡುವೆ ಸ್ಥಾಪಿಸಿದೆವು. ತರುಣವಯಸ್ಸಿನ ಗಂಡು ಹೆಣ್ಣುಗಳು ಅದರ ಸುತ್ತ ನಿಂತು ಪವಿತ್ರವಾದ ಸ್ತೋತ್ರಗೀತೆಗಳನ್ನು ಹಾಡಿದರು. ಆ ಕುದುರೆಯನ್ನು ಕಂಡ ಕೆಸಾಂಡ್ರ ಅದರಿಂದ ಮುಂದೆ ಸಂಭವಿಸಲಿರುವ ಭೀಕರ ಭವಿಷ್ಯವನ್ನು ಸಾರಿ ಹೇಳಿದರೂ ದೇವತೆಯ ಶಾಪದ ಫಲವಾಗಿ ಅವಳ ಮಾತನ್ನು ಯಾರೂ ನಂಬಲಿಲ್ಲ. ಗ್ರೀಕರು ತಾಳೆಯ ತೆಗೆದು ಹಿಂದಿರುಗಿ ಹೋದರು. ಯುದ್ಧ ಇಲ್ಲಿಗೇ ಮುಗಿಯಿತು. ಮಿನರ್ವದೇವತೆಗೆ ಅರ್ಪಿತವಾದ ಕುದುರೆಯು ಕೋಟೆಯ ಒಳಗೆ ಬಂದಿತು. ಇನ್ನೇನೂ ಚಿಂತೆಯಿಲ್ಲ ಎಂದುಕೊಂಡು ನಾವು - ನಮ್ಮ ಪಾಲಿಗೆ ಅದೇ ಕೊನೆಯ ದಿನವಾಗುತ್ತದೆ ಎಂಬ ಕಲ್ಪನೆಯಿಲ್ಲದೆ, ಊರಿನ ಎಲ್ಲ ದೇವತೆಗಳಿಗೂ ಮಾಲಾರ್ಪಣೆ ಮಾಡುತ್ತಾ ಇಡೀ ಹಗಲು ಕಳೆದವು.

''ಹೀಗೇ ಕಾಲ ಸರಿದು ಕತ್ತಲು ಕವಿಯಿತು. ಎಲ್ಲ ಟ್ರೋಜನರೂ ನೆಮ್ಮದಿಯಿಂದ ಉಂಡು ಮಲಗಿದರು. ಆದರೆ ಶತ್ರು ಎಚ್ಚತ್ತಿದ್ದ. ಈ ನಡುವೆ ಟೆನಿಡೋಸ್ ದ್ವೀಪದ ಬಳಿ ತಂಗಿದ್ದ ಗ್ರೀಕರ ಹಡಗು ಪಡೆ ಬೆಳದಿಂಗಳ ತಣ್ಬೆಳಕಿನಲ್ಲಿ ನಿಶ್ಶಬ್ದವಾಗಿ ಪುನಃ ಕಡಲ ತೀರಕ್ಕೆ ಬಂದಿತು. ತಾವು

ತೀರಕ್ಕೆ ಬಂದ ಗುರುತಾಗಿ ನಾಯಕನೌಕೆಯ ಮೇಲಿಂದ ಅವರು ಎತ್ತರಕ್ಕೆ ಪಂಜು ಹಿಡಿದು ತೋರಿಸಿದರು. ಆ ಸಂಕೇತವನ್ನು ಕಂಡ ಸಿನೋನನು ಮೆಲ್ಲಗೆ ಹೋಗಿ, ಆ ಮರದ ಕುದುರೆಯ ಉದರದ ಬಾಗಿಲನ್ನು ತೆಗೆದು ಒಳಗೆ ಅಡಗಿ ಕುಳಿತಿದ್ದ ವೀರರನ್ನು ಬಿಡುಗಡೆ ಮಾಡಿದ. ಥೆಸಂಡರ್, ಸ್ತೆನಿಲಸ್, ಯೂಲಿಸಿಸ್, ಅಕಾಮಸ್, ಥೋವಸ್, ಪಿರ್ಹಸ್, ಮಕಾವೋನ್, ಮೆನಿಲೇಯಸ್, ಆ ಮರದ ಕುದುರೆಯನ್ನು ನಿರ್ಮಿಸಿದ ಶಿಲ್ಪಿ ಎಪೀಯಸ್ ಮುಂತಾದವರು ನೂಲೇಣಿ ಹಿಡಿದು ಕೆಳಗಿಳಿದು, ನಿದ್ರೆಯಲ್ಲಿ ಮುಳುಗಿದ್ದ ನಗರದ ಬೀದಿ ಬೀದಿಗಳಲ್ಲಿ ಹರಿದರು. ಕೋಟೆಯ ದ್ವಾರಪಾಲಕರನ್ನು ಇಂದು ಸಾಯಿಸಿ, ಬಾಗಿಲು ತೆರೆದು, ಹಡಗಿನಿಂದ ಇಳಿದು ಬಂದ ತಮ್ಮ ಸೈನ್ಯವನ್ನು ಸ್ವಾಗತಿಸಿದರು. ಎಲ್ಲರೂ ಒಂದಾಗಿ ಸೇರಿ ನಗರವನ್ನು ಮುತ್ತಿದರು.

ಎಲ್ಲರಂತೆ ನಾನೂ ಮಲಗಿ ನಿದ್ದೆ ಮಾಡುತ್ತಿದ್ದೆ. ಆಗ ಕನಸಿನಲ್ಲೆಂಬಂತೆ ಹೆಕ್ಟರನ ಮೂರ್ತಿ–ಯುದ್ಧದಲ್ಲಿ ಅಕಿಲೀಸನಿಂದ ಮರಣಾಂತಿಕ ಪೆಟ್ಟುತಿಂದು ಬಿದ್ದಾಗ ಹೇಗಿದ್ದನೊ ಆ ರೂಪದಲ್ಲಿ ಕಾಣಿಸಿಕೊಂಡಿತು. ರಥದ ಹಿಂದೆ ಕಟ್ಟಿ ಎಳೆಯಲ್ಪಟ್ಟ ಅವನ ಶರೀರ ನಜ್ಜುಗುಜ್ಜಾಗಿ, ಅವನ ಗಡ್ಡಮೀಸೆ ತಲೆಗೂದಲು ರಕ್ತದಲ್ಲಿ ತೊಯ್ದು ಹೆಣೆದುಕೊಂಡಿದ್ದುವು. ಮುಖ ಮೈಯೆಲ್ಲ ಧೂಳೀಧೂಸರಿತವಾಗಿದ್ದುವು. ಸ್ನಾಯುಗಳನ್ನು ಕತ್ತರಿಸಿ ಚರ್ಮದ ಪಟ್ಟಿಕೆಯನ್ನು ಬಿಗಿದ ಅವನ ಪಾದಗಳು ಊದಿ ಬಾದಾಳವಾಗಿದ್ದುವು. ಅವನನ್ನು ಆ ರೂಪದಲ್ಲಿ ಕಂಡ ನಾನು ಕಣ್ಣೀರು ತುಂಬಿ ಅವನೊಂದಿಗೆ ಮಾತಿಗೆ ತೊಡಗಿದೆ. ಅವನೂ ಕಣ್ಣೀರು ಹರಿಸುತ್ತ, 'ಓ ! ಈನೀಯಸ್ ! ಈ ಬೆಂಕಿಯ ಜ್ವಾಲೆಯಿಂದ ತಪ್ಪಿಸಿಕೊಂಡು ಮೊದಲು ಓಡಿ ಹೋಗು. ಕೋಟೆಯನ್ನು ಶತ್ರುಗಳು ಹಿಡಿದಿದ್ದಾರೆ. ಟ್ರಾಯ್‌ನಗರ ಕುಸಿದು ಬೀಳುತ್ತಿದೆ. ಅದನ್ನು ನೀವ್ಯಾರೂ ರಕ್ಷಿಸಲಾರಿರಿ. ಈಗ ನೀನು ಮಾಡಬೇಕಾದ ಕೆಲಸವೆಂದರೆ ನಮ್ಮ ನಾಡಿನ ದೇವರುಗಳನ್ನು ಜೋಪಾನ ಮಾಡುವುದು. ಅವುಗಳನ್ನು ಎತ್ತಿಕೊಂಡು ಹೋಗಿ, ಬೇರೊಂದೆಡೆ ಬಲವಾದ ಒಂದು ನಗರವನ್ನು ಕಟ್ಟಿ, ಅಲ್ಲಿ ಸ್ಥಾಪಿಸಿ, ಪೂಜೆ ಪ್ರಾರ್ಥನೆಗಳಿಗೆ ವ್ಯವಸ್ಥೆ ಮಾಡು' ಎಂದು ಹೇಳುತ್ತ ಗೃಹಾಗ್ನಿದೇವತೆ ವೆಸ್ಟಾಳಮೂರ್ತಿಯನ್ನೂ ಪವಿತ್ರಾಗ್ನಿಯನ್ನು ಇಟ್ಟಿದ್ದ ಕುಂಡವನ್ನೂ ನನ್ನ ಕೈಗೆ ನೀಡಿದಂತಾಯಿತು. ನನಗೆ ಎಚ್ಚರವಾಯಿತು.

ಈ ನಡುವೆ ಶತ್ರುಗಳು ನಗರದಲ್ಲಿ ಮಾರಣಹೋಮ ನಡೆಸಿದ್ದರು. ಜನರ ಕೂಗಾಟ ನೋವು ನರಳಿಕೆಗಳು ಮುಗಿಲು ಮುಟ್ಟುತ್ತಿದ್ದುವು. ನಮ್ಮ ಅರಮನೆ ಊರಿನಿಂದ ದೂರವಾಗಿ ಒಂದು ಮರಗಳ ತೋಪಿನ ನಡುವೆ ಮರೆಯಾಗಿತ್ತು. ನಾನು ತಟ್ಟನೆ ಮೇಲೆದ್ದು, ಮೇಲ್ಛಾವಣಿಯ ಮೇಲೆ ಹತ್ತಿ ನಿಂತು ನೋಡತೊಡಗಿದೆ. ಅಲ್ಲಿಗೆ ಏನೂ ಅನುಮಾನ ಉಳಿಯಲಿಲ್ಲ. ಗ್ರೀಕರು ಮಾಡಿದ ವಂಚನೆ ತತ್‌ಕ್ಷಣ ತಿಳಿದುಬಂದಿತು. ಆ ವೇಳೆಗಾಗಲೇ ಡೀಯಿಫೋಬಸನ ಅರಮನೆ ಬೆಂಕಿಗೆ ಆಹುತಿಯಾಗಿ, ಅದರ ಪಕ್ಕದ ಮನೆಯೂ ಹೊತ್ತಿ ಉರಿಯುತ್ತಿತ್ತು. ಅಷ್ಟೆತ್ತರಕ್ಕೆ ಎದ್ದ ಉರಿಯ ಜ್ವಾಲೆಗಳು ಪಕ್ಕದ ಸಮುದ್ರದ ನೀರಿನಲ್ಲಿ ಪ್ರತಿಬಿಂಬಿತವಾಗುತ್ತಿದ್ದುವು. ಜನಗಳ ಕೂಗು, ಯುದ್ಧದ ತುತ್ತೂರಿಯ ಶಬ್ದ ಎದೆಯೊಡೆಯುವಂತೆ ಕೇಳಿ ಬರುತ್ತಿತ್ತು. ಕೂಡಲೇ ನಾನು ಭಯಾತಂಕಗಳಿಂದ ಕೂಗುತ್ತ ಆಯುಧ ಹಿಡಿದು ನನ್ನ ಜೊತೆಗಾರರನ್ನು ಒಡಗೊಂಡು ಅತ್ತ ಯುದ್ಧ ನಡೆಯುತ್ತಿದ್ದ ಕಡೆಗೆ ಓಡಬೇಕು.

ಅಷ್ಟು ಹೊತ್ತಿಗೆ ಅಪಾಲೋ ದೇವತೆಯ ಪೂಜಾರಿ ಪ್ಯಾಂಥಸ್ ಎಂಬುವನು ತಾನು ಪೂಜೆ

ಮಾಡುತ್ತಿದ್ದ ದೇವತೆಗಳ ವಿಗ್ರಹಗಳನ್ನು ಹೊತ್ತು, ಗ್ರೀಕರ ಹೊಡೆತವನ್ನು ತಪ್ಪಿಸಿಕೊಂಡು, ತನ್ನ ಮೊಮ್ಮಗುವಿನ ಕೈಹಿಡಿದುಕೊಂಡು, ನಮ್ಮ ಮನೆಯ ಬಾಗಿಲಿಗೆ ಬಂದ. 'ನಮ್ಮ ಕೊನೆಗಾಲ ಬಂದಿತು. ಟ್ರೋಜನರಗತಿ ಇಲ್ಲಿಗೆ ಮುಗಿಯಿತು. ಟ್ರಾಯ್‌ನಗರ ಧ್ವಂಸವಾಯಿತು. ಟ್ಯೂಕರನ ವಂಶದ ಕೀರ್ತಿ ಕೊನೆಗೊಂಡಿತು. ಊರಿಗೆ ಬೆಂಕಿ ಬಿದ್ದು ಹೊತ್ತು ಉರಿಯುತ್ತಿದೆ. ಶತ್ರುಗಳು ಕೋಟೆಯನ್ನು ಹಿಡಿದಿದ್ದಾರೆ. ಕುದುರೆಯ ಹೊಟ್ಟೆಯಿಂದ ಶತ್ರುಗಳು ದಳದಳನೆ ಇಳಿಯುತ್ತಿದ್ದಾರೆ. ಸಿನೋನನು ಎಲ್ಲ ಕಡೆಯಲ್ಲೂ ಬೆಂಕಿ ಹಚ್ಚುತ್ತಿದ್ದಾನೆ. ಕೋಟೆಯ ಬಾಗಿಲನಿಂದ ಸಾವಿರ ಸಾವಿರ ಸಂಖ್ಯೆಯಲ್ಲಿ ಶತ್ರು ಸೈನಿಕರು ಒಳನುಗ್ಗಿ ಬೀದಿಬೀದಿಗಳಲ್ಲಿ ತಿರುಗುತ್ತ ಸಿಕ್ಕಿದವರನ್ನೆಲ್ಲ ಇರಿದು ಸಾಯಿಸುತ್ತಿದ್ದಾರೆ' ಎಂದು ಒಂದೇ ಉಸಿರಿಗೆ ಹೇಳಿದ.

ಕೂಡಲೇ ನಾನು ರಣಗರ್ಜನೆ ಮಾಡುತ್ತ ಯುದ್ಧಕ್ಕೆ ಧುಮುಕಿದೆ. ನನ್ನ ಕರೆಕೇಳಿ ಕೆಲ ವೀರರು ನನ್ನಜೊತೆಗೂಡಿದರು. ಪ್ರಿಯಾಮನ ಮಗಳು ಸಾಂಡ್ರಾಳನ್ನು ಮದುವೆಯಾಗುವ ಆಸೆಯಿಂದ ಬಂದಿದ್ದ ತರುಣ ಕೊರೀಬಸನೂ ಅವರಲ್ಲೊಬ್ಬ. ನಾವೆಲ್ಲರೂ ಊರಿನ ನಡುವೆಗೆ ಓಡಿದೆವು. ಅಯ್ಯೋ, ಅಲ್ಲಿ ಕಂಡ ದೃಶ್ಯವನ್ನು ಏನೆಂದು ವರ್ಣಿಸಲಿ? ಎಲ್ಲೆಲ್ಲೂ ಹೆಣಗಳೇ ಹೆಣಗಳು. ಪ್ರತಿಭಟನೆಯೇ ಇಲ್ಲದೆ ಶತ್ರುಗಳ ಏಟಿಗೆ ಸಿಕ್ಕಿ ಸತ್ತು ಬಿದ್ದ ಟ್ರೋಜನರ ಹೆಣಗಳು ಬೀದಿ ಬೀದಿಗಳಲ್ಲಿ, ಮನೆಮನೆಗಳಲ್ಲಿ, ದೇವಾಲಯಗಳ ಹೊಸಲ ಬಳಿ ರಾಶಿರಾಶಿಯಾಗಿ ಬಿದ್ದಿದ್ದುವು. ಆ ಕೈಕೈ ಹೋರಾಟದಲ್ಲಿ ಕೆಲವು ಗ್ರೀಕ್ ಸೈನಿಕರೂ ಮಡಿದು ಬಿದ್ದಿದ್ದರು.

ಆಗ ಶತ್ರುಪಕ್ಷದ ಆಂಡ್ರೋಜಿಯಸ್ ಎಂಬ ವೀರನು ತನ್ನ ಸೈನಿಕರ ಪಡೆಯೊಂದಿಗೆ ನಮಗೆ ಅಡ್ಡವಾಗಿ ಬರುತ್ತ, ಆ ಕತ್ತಲೆಯಲ್ಲಿ ನಮ್ಮನ್ನು ಕಂಡು, ನಾವು ತಮ್ಮ ಪಕ್ಷದವರೇ ಎಂದು ತಿಳಿದು 'ಬನ್ನಿ ಬನ್ನಿ, ಜೊತೆಯಲ್ಲಿ ಹೋಗೋಣ, ಏಕೆ ತಡಮಾಡಿದಿರಿ? ಈಗಷ್ಟೇ ಹಡಗಿನಿಂದ ಇಳಿದು ಬಂದಿರಾ? ನೋಡಿ, ಟ್ರಾಯ್‌ನಗರ ಹೊತ್ತು ಉರಿಯುತ್ತಿದೆ. ನಮ್ಮ ಸೈನಿಕರು ಊರನ್ನು ಲೂಟಿ ಮಾಡುತ್ತಿದ್ದಾರೆ. ನೀವಿನ್ನೂ ಸೋಮಾರಿಗಳಂತೆ ಮಂದಗತಿಯಲ್ಲಿ ಬರುತ್ತಿದ್ದೀರಿ!' ಎಂದು ಹೇಳಹೇಳುತ್ತಲೇ ಹತ್ತಿರ ಹತ್ತಿರ ಬಂದು, ನಮ್ಮಿಂದ ತತ್‌ಕ್ಷಣ ಯಾವ ಉತ್ತರವೂ ಬರದಿದ್ದುನ್ನು ಕಂಡು, ನಾವು ಟ್ರೋಜನರು ಎಂದು ತಿಳಿದು ಭಯ ಹೊಡೆದು ಅವಾಕ್ಕಾದ, ಮುಳ್ಳುಗಿಡಗಳಿಂದ ತುಂಬಿದ ದಾರಿಯಲ್ಲಿ ಕಾಣದೆ ಹಾವು ತುಳಿದು, ಅದು ರೋಷದಿಂದ ಕುತ್ತಿಗೆ ಉಬ್ಬಿಸಿಕೊಂಡು, ಕಣ್ಣುಗಳಲ್ಲಿ ಕಿಡಿಕಾರುತ್ತ, ಹೆಡೆಯೆತ್ತಿ ಭುಸುಗುಡುವುದನ್ನು ಕಂಡು ಹೆದರಿ ಹಿಮ್ಮೆಟ್ಟಿದ ದಾರಿಹೋಕನಂತೆ ಆಂಡ್ರೋಜಿಯಸ್ ಹಿಂದೆ ಸರಿದ. ಕೂಡಲೆ ನಾನು ಅವರ ಸುತ್ತ ಮುತ್ತಿಕೊಂಡು ಆಕ್ರಮಣ ಮಾಡಿದೆವು. ಆ ಪ್ರದೇಶದ ಪರಿಚಯವಿಲ್ಲದೆ, ಎತ್ತ ಹೋಗಲೂ ತೋಚದೆ ಅವರು ನಮ್ಮ ಕತ್ತಿಯ ಏಟಿಗೆ ಆಹುತಿಯಾದರು. ನಮಗೆ ಹೀಗೆ ಪ್ರಾರಂಭದಲ್ಲೇ ಗೆಲುವು ಸಾಧಿಸಿತು. ಆಗ ನಮ್ಮ ಕಡೆಯ ಕೊರೀಬಸನು 'ಗೆಳೆಯರೇ! ಅದೃಷ್ಟ ನಮಗೆ ಒಲಿದಿದೆ. ಮುಂದೆ ನುಗ್ಗಿ ಹೋಗೋಣ, ಬನ್ನಿರಿ. ಈಗ ಒಂದು ಉಪಾಯ ಮಾಡೋಣ, ಇಲ್ಲಿ ಇಷ್ಟೊಂದು ಮಂದಿ ಗ್ರೀಕ್ ಸೈನಿಕರು ಮಡಿದು ಬಿದ್ದಿದ್ದಾರೆ. ನಾವು ಅವರ ಕವಚ ಶೀರ್ಷಕ ಧರಿಸಿ ಆಯುಧ ಹಿಡಿದು ಮುಂದೆ ಹೋಗೋಣ. ನಿಜವಾಗಿ ನಾವು ಯಾರು ಎಂಬುದು ಶತ್ರುಗಳಿಗೆ ಗೊತ್ತಾಗುವ ಮೊದಲೇ ನಾವು ಅವರನ್ನು ಇರಿದು ಸಾಯಿಸೋಣ. ಯುದ್ಧದಲ್ಲಿ ಯಾವ ಯುಕ್ತಿಯೂ ಸರಿಯೆ!'

ಎಂದು ಹೇಳುತ್ತ ಆಂಡ್ರೋಜಿಯಸನ ಶೀರ್ಷಕ ತೊಟ್ಟು ಅವನ ಗುರಾಣಿ ಮತ್ತು ಕತ್ತಿಯನ್ನು ಹಿಡಿದುಕೊಂಡ, ಅಂತೆಯೇ ಉಳಿದ ವೀರರೂ ವೇಷ ಬದಲಿಸಿಕೊಂಡರು. ಅಲ್ಲಿಂದ ನಾವು ಮುಂದೆ ಹೋಗಿ ವೀರ ಗ್ರೀಕ್ ಸೈನಿಕರೊಂದಿಗೆ ಬೆರೆತು, ಆ ಅರಬರೆ ಕತ್ತಲೆಯಲ್ಲಿ ಅವರಲ್ಲನೇಕರನ್ನು ಕೊಂದು ಹೆಣ ಉರುಳಿಸಿದೆವು. ಕೆಲವರು ಭಯಗೊಂಡು ತಮ್ಮ ಹಡಗುಗಳತ್ತ ಓಡಿದರು. ಕೆಲವರು ಓಡಿಹೋಗಿ, ಆಳೆತ್ತರದ ಕುದುರೆಯ ಹೊಟ್ಟೆಯೊಳಗೆ ಅವಿತುಕೊಂಡರು.

ಆದರೆ ದೈವೇಚ್ಛೆಯ ಮುಂದೆ ಮನುಷ್ಯನ ಪ್ರಯತ್ನ ಏನು ನಡೆದೀತು? ಈ ನಡುವೆ ಕೆಲವು ಶತ್ರುಗಳು ಮಿನರ್ವ ದೇವಾಲಯಕ್ಕೆ ನುಗ್ಗಿ ಹೋಗಿ, ಅಲ್ಲಿ, ಪ್ರಯಾಮನ ಮಗಳು ಕೆಸಾಂಡ್ರಾಳನ್ನು ಹಿಡಿದು, ಕೈಗೆ ಕೊಲ್ಲಿ ಬಿಗಿದು ದರದರನೆ ಎಳೆದುಕೊಂಡು ಬರುತ್ತಿದ್ದರು. ಅದನ್ನು ನೋಡಿ ತಡೆಯಲಾರದೆ ನಮ್ಮ ಕಡೆಯ ಕೊರೀಬಸನು – ಕೆಸಾಂಡ್ರಾಳನ್ನು ಮದುವೆಯಾಗುವ ಆಸೆಯಿಂದ ಪ್ರಯಾಮನಿಗೆ ಸಹಾಯವಾಗಿ ಬಂದವನು – ಅವಳ ರಕ್ಷಣೆಗೆ ಓಡಿದ. ನಾವೂ ಅವನನ್ನು ಹಿಂಬಾಲಿಸಿದೆವು. ಆಗ ನಮ್ಮ ವೇಷ ನೋಡಿ ನಮ್ಮನ್ನು ಗ್ರೀಕರೆಂದೇ ತಿಳಿದು ಟ್ರೋಜನರು ದೇವಾಲಯದ ಗೋಪುರದ ಮೇಲಿಂದ ನಮ್ಮ ಮೇಲೆ ಬಾಣಗಳ ಮಳೆಯನ್ನೇ ಕರೆಯತೊಡಗಿದರು. ಕೆಸಾಂಡ್ರಾಳ ರಕ್ಷಣೆಗೆ ಓಡಿದ ನಮ್ಮ ಮೇಲೆ ಇತ್ತ ಗ್ರೀಕರೂ ಆಕ್ರಮಣ ಮಾಡಿದರು. ಹೀಗೆ ನಮಗೀಗ ಎರಡು ಕಡೆಯಿಂದಲೂ ಹೊಡೆತಗಳು ಬೀಳತೊಡಗಿದವು, ಶತ್ರುಪಕ್ಷದ ಏಜಾಕ್ಸ್, ಅಗಮೆಮ್ನನ್, ಮೆನಿಲೇಯಸ್ ಮುಂತಾದ ವೀರರು ನಮ್ಮ ಮೇಲೆ ಭೀಕರವಾಗಿ ಏರಿ ಬಂದರು. ನಾವು ಯುದ್ಧ ಮಾಡುತ್ತಿದ್ದ ರೀತಿ ಮತ್ತು ನಮ್ಮ ಉಚ್ಚಾರಣೆಯಲ್ಲಿದ್ದ ವ್ಯತ್ಯಾಸವನ್ನು ಗುರುತಿಸಿ ನಾವು ಗ್ರೀಕ್‌ವೇಷ ತೊಟ್ಟ ಟ್ರೋಜನರೇ ಎಂಬುದು ಖಾತರಿಯಾಗಿ ಅವರು ನಮ್ಮನ್ನು ಕೊಚ್ಚಿ ಹಾಕತೊಡಗಿದರು. ಅವರ ಆಕ್ರಮಣಕ್ಕೆ ಕೊರೀಬಸನೇ ಮೊದಲ ಬಲಿಯಾದ. ನನ್ನ ಜೊತೆಗೂಡಿ ಬಂದಿದ್ದ ಅನೇಕ ವೀರರು ಮಡಿದುರುಳಿದರು. ಅಪಾಲೋ ದೇವತೆಯ ಪೂಜಾರಿ ಪ್ಯಾಂಥಸನೂ ಸತ್ತ.

ಜೀವ ಸಹಿತ ಉಳಿದ ಇಬ್ಬರು ವೀರರನ್ನು ಕೂಡಿಕೊಂಡು ನಾನು, ಪ್ರಯಾಮನ ಅರಮನೆಯ ಕಡೆಯಿಂದ ಬಂದ ಕೂಗು ಕೇಳಿ ಆ ಕಡೆಗೆ ಓಡಿದೆ. ಬೇರೆಲ್ಲಿಗಿಂತಲೂ ಅಲ್ಲಿ ಬಿರುಸಾದ ಕಾಳಗ ನಡೆದಿತ್ತು. ಶತ್ರುಗಳು ಅರಮನೆಯ ಒಳಗೆ ನುಗ್ಗಲು ಪ್ರಯತ್ನ ಮಾಡುತ್ತಿದ್ದರು. ನಮ್ಮ ಸೈನಿಕರು ಗುರಾಣಿಗಳನ್ನು ಗೋಡೆಯಂತೆ ಅಡ್ಡ ಹಿಡಿದು ಅವರನ್ನು ತಡೆಯಲು ಪರಮ ಸಾಹಸ ಮಾಡುತ್ತಿದ್ದರು. ನಾನು ಅರಮನೆಯ ಹಿಂಬದಿಯಲ್ಲಿ ಗುಪ್ತವಾಗಿದ್ದ ಒಂದು ಕಿರಿದಾದ ಓಣಿಯಲ್ಲಿ ಹಾದು ಬಂದು ಗೋಪುರದ ಮೇಲೆ ಹತ್ತಿದೆ. ಟ್ರೋಜನ್ ಸೈನಿಕರು ಅಲ್ಲಿಂದ ಶತ್ರುಗಳ ಮೇಲೆ ಬಾಣ ಬಿಡುತ್ತಿದ್ದರು. ನಾನು ಗೋಪುರದ ಬುಡಕ್ಕೆ ಬಂದು ಇತರರ ಸಹಾಯ ಪಡೆದು ಆ ಗೋಪುರದ ಬುಡಕ್ಕೆ ಈಟಿಗಳನ್ನು ಕೊಟ್ಟು ಜರುಗಿಸಿ ಶತ್ರುಗಳ ಮೇಲೆ ಉರುಳಿಸಿದೆ. ಅದರಿಂದ ಅನೇಕರು ಸತ್ತರೂ ಇತರರು ಓಡಿ ಬಂದು ಅವರ ಜಾಗ ತುಂಬಿದರು.

ಇತ್ತ ಪಿರ್‍ಹಸನು ತನ್ನ ಪಡೆಯನ್ನು ಕೂಡಿಕೊಂಡು ಪೊರೆಬಿಟ್ಟ ಹಾವಿನಂತೆ ಮಿಂಚಿನ ವೇಗದಲ್ಲಿ ಅರಮನೆಯ ಮಹಾದ್ವಾರದ ಮುಂದೆ ಬಂದ. ಅವನ ಜೊತೆಯಲ್ಲಿದ್ದವರು ಸುತ್ತ ಎತ್ತಲೂ ಉರಿಯುವ ಪಂಜುಗಳನ್ನು ಎಸೆಯುತ್ತಿದ್ದರು. ಪಿರ್‍ಹಸನು ಬಾಗಿಲನ್ನೂ ಒಡೆದು

ಅಷ್ಟಗಲ ಕಿಂಡಿ ಮಾಡಿದ. ಆ ಕಿಂಡಿಯ ಮೂಲಕ ಕಾಣುತ್ತಿದ್ದ ಅರಮನೆಯ ಒಳಗಿನ ದೃಶ್ಯ ಭಯಂಕರವಾಗಿತ್ತು. ರಾಣಿಯರು, ರಾಜಕುಮಾರಿಯರು, ದಾಸಿಯರು ಚಿಕ್ಕ ಚಿಕ್ಕ ಮಕ್ಕಳೊಡಗೂಡಿ ದಿಕ್ಕು ತೋರದೆ ಪ್ರಾಣಭಯದಿಂದ ಕಿರಿಚಾಡುತ್ತ ಅತ್ತ ಇತ್ತ ಪರಿದಾಡುತ್ತಿದ್ದರು. ಇತ್ತ ಗ್ರೀಕ್ ಸೈನಿಕರು ಬಾಗಿಲ ಮೇಲೆ ಮತ್ತೆ ಮತ್ತೆ ಹೊಡೆದು ಕೆಡವಿದರು. ಪಿರ್ಹಸನು ಒಳಗೆ ನುಗ್ಗಿದ, ಅವನ ಹಿಂದೆ ಅವನ ಸೇನೆಯೂ ನುಗ್ಗಿತು. ತಮಗೆ ಸಿಕ್ಕಿದವರನ್ನೆಲ್ಲ ಅವರು ನಿರ್ದಯೆಯಿಂದ ಕೊಚ್ಚಿಹಾಕಿದರು. ಪಿರ್ಹಸನ ಜೊತೆ ಅಗಮೆಮ್ನನ್ ಮತ್ತು ಮೆನಿಲೇಯುಸರೂ ಅರಮನೆಯ ಒಳಗೆ ನುಗ್ಗಿದ್ದರು. ಪ್ರಯಾಮ್ ಮತ್ತು ರಾಣಿ ಹೆಕ್ಯೂಬ ತನ್ನ ನೂರು ಮಂದಿ ಸೊಸೆಯಂದಿರೊಂದಿಗೆ ಒಳಗಿನ ಬಲಿಗಂಬದ ಬಳಿ ಭಯಾರ್ತವಾಗಿ ನಿಂತಿದ್ದದ್ದು ನನಗೆ ದೂರದಿಂದಲೇ ಕಾಣಿಸಿತು. ದೊರೆಯು ತನ್ನ ಮಕ್ಕಳಿಗಾಗಿ ಕಟ್ಟಿಸಿದ್ದ ಐವತ್ತು ಭವ್ಯವಾದ ಶಯ್ಯಾಗೃಹಗಳೂ ತಮ್ಮ ಬಂಗಾರದ ಬಾಗಿಲುಗಳೊಂದಿಗೆ ಒಳಗೆ ಶೇಖರವಾಗಿದ್ದ ಅನರ್ಘ್ಯ ನಿಧಿಯ ಸಮೇತ ಉರಿದ ಬೂದಿಯಾಗಿ ಕೆಳಗೆ ಉರುಳಿ ಬೀಳುತ್ತಿದ್ದುವು.

ಸುತ್ತ ಮುತ್ತ ಶತ್ರುಗಳು ಮುತ್ತಿಕೊಂಡಿದ್ದರೂ, ಅಗ್ನಿಪ್ರಕೋಪ ಎಲ್ಲೆಲ್ಲೂ ತಾಂಡವವಾಡುತ್ತಿದ್ದರೂ ಲೆಕ್ಕಿಸದೇ ಪ್ರಯಾಮನು ಶತ್ರುಗಳ ಮೇಲೆ ಸೇಡು ತೀರಿಸಿಕೊಳ್ಳಲು ತನ್ನ ನಡುಗುವ ಕೈಗಳಿಂದಲೇ ಕವಚ ತೊಟ್ಟು ಕತ್ತಿ ಹಿಡಿದು ಹೊರ ಹೋದ. ಅರಮನೆಯ ಒಳ ಅಂಗಳದಲ್ಲಿ ದೇವತೆಗಳಿಗೆ ಮೀಸಲಾದ ಒಂದು ಬಲಿಗಂಬವಿದ್ದಿತು. ಅದರ ಬದಿಯಲ್ಲೊಂದು ಹಳೆಯ ಮರ ತನ್ನ ಕೊಂಬೆರೆಂಬೆಗಳನ್ನು ಚಾಚಿಕೊಂಡು ಬೆಳೆದು ನಿಂತಿತ್ತು. ಅದರ ನೆರಳಿನಲ್ಲಿ ಅರಮನೆಯ ದೇವರುಗಳನ್ನು ಪ್ರತಿಷ್ಠಾಪನೆ ಮಾಡಿದ್ದರು. ಈ ಜಾಗದಲ್ಲಿ ಹೆಕ್ಯೂಬ ಮತ್ತು ಇತರ ಹೆಂಗಸರು ಬೆದರಿದ ಪಾರಿವಾಳಗಳಂತೆ, ದೇವತಾಮೂರ್ತಿಗಳನ್ನು ತಬ್ಬಿ ಹಿಡಿದು ಭಯದಿಂದ ಕಣ್ಣು ಬೆಳ್ಳಾಗಿ ಕುಳಿತಿದ್ದರು. ಪ್ರಯಾಮನನ್ನು ಕಂಡ ಹೆಕ್ಯೂಬ ಆತಂಕಗೊಂಡು, 'ಏಕೆ ಈ ವೇಷ ತೊಟ್ಟೆ, ಪ್ರಯಾಮ್? ಸತ್ತ ನಮ್ಮ ಮಗ ಹೆಕ್ಟರ್ ಎದ್ದು ಬಂದರೂ ಈ ಸ್ಥಿತಿಯಲ್ಲಿ ನಮ್ಮನ್ನು ಕಾಪಾಡಲಾರ. ಈ ಬಲಿಗಂಬದ ಬಳಿ ಬಾ, ಇದೊಂದೇ ಈಗ ನಮಗೆ ರಕ್ಷಣೆ' ಎಂದು ಹೇಳುತ್ತ ಅವಳೇ ಮುಂದೆ ಬಂದು ಅವನನ್ನು ಎಳೆದುಕೊಂಡು ಹೋಗಿ ಅಲ್ಲೊಂದೆಡೆ ಕೂರಿಸಿದಳು.

ಅಷ್ಟು ಹೊತ್ತಿಗೆ ಪ್ರಯಾಮನ ಮಗ ಪೋಲೈಟೀಸನನ್ನು ಅಟ್ಟಿಕೊಂಡು ಹಿರಿದ ಕತ್ತಿಯೊಂದಿಗೆ ಪಿರ್ಹಸ್ ನುಗ್ಗಿ ಬಂದ. ಗಾಯಗೊಂಡ ಪೋಲೈಟೀಸನು ಶತ್ರುಗಳ ಬಾಣದೇಟುಗಳನ್ನು ತಪ್ಪಿಸಿಕೊಳ್ಳುತ್ತ ಅರಮನೆಯ ಸಂದಿಗೊಂದಿಗಳಲ್ಲಿ, ಖಾಲಿ ಹೊಡೆಯುತ್ತಿದ್ದ ಹಜಾರಗಳಲ್ಲಿ ಧಡಗುಟ್ಟಿಕೊಂಡು ಓಡಿಬರುತ್ತಿದ್ದ. ಈಗ ಅವನು ತನ್ನ ತಂದೆ ತಾಯಿಯರ ಮುಂದೆ ಬಂದವನು ಅವರ ಎದುರಿನಲ್ಲೇ ರಕ್ತಕಾರಿ ಸತ್ತು ಬಿದ್ದ. ಅದನ್ನು ಕಂಡ ಪ್ರಯಾಮನು ಅತೀವ ಸಂಕಟದಿಂದ ನರಳುತ್ತ 'ನನ್ನ ಕಣ್ಣೆದುರಿಗೇ ನನ್ನ ಮಗನನ್ನು ಕೊಂದೆಯಲ್ಲ, ಸ್ವರ್ಗದ ದೇವತೆಗಳು ಇದಕ್ಕೆ ತಕ್ಕ ಪ್ರತೀಕಾರ ತೀರಿಸಲಿ. ನಿನ್ನ ತಂದೆ ಅಕಿಲೀಸನು ನನ್ನನ್ನು ಕರುಣೆಯಿಂದ ಕಂಡು ನನ್ನ ಮಗ ಹೆಕ್ಟರನ ಶವವನ್ನು ನನಗೆ ಒಪ್ಪಿಸಿದ. ಅವನ ಮಗ ಎಂದು ಹೇಳಿಕೊಳ್ಳುತ್ತೀಯಲ್ಲ ನೀನು, ನನ್ನ ಕಣ್ಣೆದುರಿಗೇ ನನ್ನ ಮಗನನ್ನು ಕೊಂದೆ!' ಎಂದು ಅಳಲಿಕೊಂಡು, ತನ್ನ ಕೈಲಿದ್ದ ಈಟಿಯನ್ನು ತೂಗಿ ಪಿರ್ಹಸನನ್ನು ಹೊಡೆದ. ಅದು ಅವನ ಗುರಾಣಿಗೆ ನಾಟಿಕೊಂಡು ಮುಂದೆ ಹೋಗಲು ಶಕ್ತಿ ಸಾಲದೆ ಅಲ್ಲೇ ತಡೆದು

ನಿಂತಿತು. ಪ್ರಯಾಮನ ಮಾತಿಗೆ ಪಿರ್ಹಸನು ಅಣಕವಾಡುತ್ತ 'ಹೋಗು, ನಿನ್ನ ಮಗ ಹೀಗೆ ಮಾಡಿದ ಎಂದು ನಮ್ಮಪ್ಪನಿಗೆ ದೂರು ಹೇಳು ಹೋಗು, ಮರೆಯಬೇಡ !' ಎಂದು ಹೇಳುತ್ತ, ಎಡಗೈಯಿಂದ ಅವನ ತಲೆಗೂದಲನ್ನು ಹಿಡಿದು ಬಲಿಪೀಠದ ಬಳಿಗೆ ದರದರನೆ ಎಳೆದುಕೊಂಡು ಹೋಗಿ, ಬಲಗೈಯಲ್ಲಿದ್ದ ಕತ್ತಿಯಿಂದ ಅವನ ಪಕ್ಕೆಗೆ ಹಿಡಿಯವರೆಗೂ ತಿವಿದು, ಅವನ ತಲೆ ಹಾರಿಸಿದ. ಒಂದು ಕಾಲದಲ್ಲಿ ಅತ್ಯಂತ ವೈಭವದಿಂದ ಪ್ರಭಾವಶಾಲಿಯಾಗಿ ಆಳುತ್ತಿದ್ದ ಪ್ರಯಾಮನ ಹೆಣ ರುಂಡಹೀನವಾಗಿ ತುಂಡುಗಡಿದ ಮರದಕಾಂಡದಂತೆ ಉರುಳಿ ಬಿದ್ದಿತು.

ಹೀಗೆ ಪ್ರಯಾಮ್ ದೊರೆಯು ಸತ್ತು ಬಿದ್ದುದನ್ನು ಕಂಡು ನನಗೆ, ಅದೇ ವಯಸ್ಸಿನ ನನ್ನ ತಂದೆಯ ನೆನಪಾಗಿ ಭಯವಾಯಿತು. ತಂದೆಯ ಜೊತೆಗೇ ನನ್ನ ಪತ್ನಿ ಕ್ರೇಯೂಸ, ಮಗು ಇಯುಲಸ್, ಲೂಟಿಯಾದ ನನ್ನ ಮನೆ ಕಣ್ಣಮುಂದೆ ಕಟ್ಟಿ ನಿಂತಿತು. ನನ್ನ ಸಹಾಯಕ್ಕೆ ಯಾರಿದ್ದಾರೆ ಎಂದು ನಾನು ಸುತ್ತಮುತ್ತ ನೋಡಿದೆ. ನನ್ನ ಜೊತೆಗೂಡಿ ಬಂದವರಲ್ಲಿ ಯಾರೊಬ್ಬರೂ ಇರಲಿಲ್ಲ. ಶತ್ರುಗಳ ಏಟಿಗೆ ಸಿಕ್ಕಿ ಸತ್ತರೊ, ಉರಿಯುವ ಬೆಂಕಿಗೆ ಆಹುತಿಯಾದರೊ ಏನೆಂದು ಹೇಳುವುದು? ಅಂತೂ ಅಲ್ಲಿ ನಾನೊಬ್ಬನೇ ಉಳಿದಿದ್ದೆ. ಅಲ್ಲಿ ನಾನು ಅತ್ತಿತ್ತ ಹೆಜ್ಜೆಹಾಕುತ್ತ ಕಣ್ಣಾಡಿಸುತ್ತಿದ್ದಾಗ ವೆಸ್ಟಾದೇವತೆಯ ಮಂದಿರದ ಒಂದು ಕಗ್ಗತ್ತಲೆಯ ಮೂಲೆಯಲ್ಲಿ ಅಡಗಿಕೊಂಡಿದ್ದ ಹೆಲೆನ್ ಉರಿಯುವ ಬೆಂಕಿಯ ಹೊಯ್ದಾಟದ ಬೆಳಕಿನಲ್ಲಿ ಕಾಣಿಸಿದಳು. ಟ್ರಾಯ್‌ನಗರದ ಪತನಕ್ಕೆ ಕಾರಣಳಾದ ಅವಳು ಇತ್ತ ಟ್ರೋಜನರ ಕೋಪಕ್ಕೂ, ಪ್ಯಾರಿಸನ ಹಿಂದೆ ಓಡಿ ಬಂದ ತಪ್ಪಿಗೆ ಅತ್ತ ಗ್ರೀಕರ ಕೋಪಕ್ಕೂ ಒಂದೇ ರೀತಿ ಗುರಿಯಾಗಿದ್ದಳು. ಇಷ್ಟೆಲ್ಲ ಅನಾಹುತಕ್ಕೆ ಕಾರಣಳಾದ ಅವಳ ಮೇಲೆ ನನ್ನಲ್ಲಿ ಪ್ರತೀಕಾರ ಭಾವನೆ ಕೆರಳಿತು. ಇನ್ನಿವಳು ಸ್ಪಾರ್ಟಾ ನಗರಕ್ಕೆ ಹೋಗಿ ಮೊದಲಿನಂತೆ ರಾಣಿಯ ಹಾಗೆ ಮೆರೆಯುತ್ತಾಳೆ. ನಮ್ಮ ಟ್ರೋಜನ್ ಹೆಂಗಸರನ್ನು ದಾಸಿಯರನ್ನಾಗಿ ಮಾಡಿಕೊಂಡು, ಅಲ್ಲಿ ತನ್ನ ತಂದೆ ತಾಯಿ ಮಕ್ಕಳು ಗಂಡನೊಂದಿಗೆ ನೆಮ್ಮದಿಯಿಂದಿರುತ್ತಾಳೆ! ಇಷ್ಟಕ್ಕಾಗಿ ಪ್ರಯಾಮ್ ದೊರೆ ಸತ್ತನೆ? ಟ್ರಾಯ್ ನಗರ ಉರಿದು ಬೂದಿಯಾಯಿತೆ? ನನಗೆ ರೊಚ್ಚೇರಿತು. ಇವಳನ್ನು ಖಂಡಿತ ಉಳಿಯಗೊಡಬಾರದು. ಇಂತಹ ಸ್ಥಿತಿಯಲ್ಲಿ ಸಿಕ್ಕಿಬಿದ್ದ ಒಬ್ಬ ಅಸಹಾಯಕ ಹೆಣ್ಣನ್ನು ಕೊಂದು ನಾನು ಯಾವ ಕೀರ್ತಿಯನ್ನು ಗಳಿಸಬೇಕಾಗಿರಲಿಲ್ಲವಾದರೂ ಟ್ರೋಜನರ ಸರ್ವನಾಶಕ್ಕೆ ಕಾರಣಳಾದ ಒಬ್ಬ ಹೆಂಗಸನ್ನು ಕೊಂದು ಪ್ರತೀಕಾರ ತೀರಿಸಿಕೊಂಡ ಸಮಾಧಾನ ಪಡೆಯಬಹುದಾಗಿತ್ತು. ಅಷ್ಟು ಹೊತ್ತಿಗೆ ನನ್ನ ತಾಯಿ ವೀನಸ್ ದೇವತೆ ಕಾಣಿಸಿಕೊಂಡು ನನ್ನ ಕೈಹಿಡಿದು 'ಮಗನೇ ! ಟ್ರಾಯ್ ನಗರದ ಪತನಕ್ಕೆ ಹೆಲೆನ್ ಆಗಲಿ, ಪ್ಯಾರಿಸ್ ಆಗಲಿ ಕಾರಣರಲ್ಲ. ಅದೆಲ್ಲ ದೇವತೆಗಳ ಇಚ್ಛೆಯಂತೆ ನಡೆಯತಕ್ಕದ್ದು. ಈಗ ನೀನು ನಿನ್ನ ಮುದುಕ ತಂದೆ, ನಿನ್ನ ಹೆಂಡತಿ ಮತ್ತು ಮಗು ಎಲ್ಲಿದ್ದಾರೆ ಎಂಬುದನ್ನು ನೋಡು ಹೋಗು. ನಾನು ರಕ್ಷಿಸದಿದ್ದರೆ ಈ ವೇಳೆಗೆ ಅವರು ಗ್ರೀಕರ ಏಟಿಗೆ ಸಿಕ್ಕಿಯೊ ಅಥವಾ ಬೆಂಕಿಗೆ ಸಿಕ್ಕಿಯೊ ಪ್ರಾಣ ಕಳೆದುಕೊಳ್ಳುತ್ತಿದ್ದರು. ಅಲ್ಲಿ ನೋಡು, ನೆಪ್ಚ್ಯೂನ್, ಜೂನೊ, ಮಿನರ್ವ, ಜ್ಯೂಪಿಟರ್– ಎಲ್ಲ ದೇವತೆಗಳೂ ಗ್ರೀಕರಿಗೆ ಸಹಾಯ ಮಾಡುತ್ತ ಟ್ರೋಜನರನ್ನು ಮುಗಿಸುತ್ತಿದ್ದಾರೆ. ಮಗನೇ, ಈಗ ಇಲ್ಲಿಂದ ತಪ್ಪಿಸಿಕೊಂಡು ಹೋಗು. ನಿನ್ನನ್ನು ನಿನ್ನ ತಂದೆಯ ಅರಮನೆಗೆ ಸುರಕ್ಷಿತವಾಗಿ ತಲಪಿಸುವವರೆಗೂ ನಾನು ನಿನ್ನ ಕೈ ಬಿಡುವುದಿಲ್ಲ' ಎಂದು ಹೇಳಿ ಅವಳು ಕತ್ತಲೆಯ ಮುಸುಕಿನಲ್ಲಿ ಮರೆಯಾದಳು.

ನನ್ನ ಕಣ್ಣೆದುರಿಗೇ ಟ್ರಾಯ್‌ನಗರ ಹೊತ್ತಿ ಉರಿದು ಬೂದಿಯಾಗುತ್ತಿರುವುದನ್ನು ಅಸಹಾಯಕವಾಗಿ ನೋಡಿದೆ. ಅನಂತರ ಆ ಬೆಂಕಿ, ಹೆಣಗಳು, ಶತ್ರುಗಳ ನಡುವೆಯೇ ದಾರಿ ಮಾಡಿಕೊಂಡು ನನ್ನ ತಾಯಿಯನ್ನು ಹಿಂಬಾಲಿಸಿ ನಡೆದು ನನ್ನ ತಂದೆಯ ಅರಮನೆಯನ್ನು ತಲಪಿದೆ. ಅಲ್ಲಿಂದ ನನ್ನ ತಂದೆಯನ್ನೆತ್ತಿಕೊಂಡು ಬೆಟ್ಟದ ದಾರಿ ಹಿಡಿದು ಸಾಗಬೇಕು. ಆದರೆ ನನ್ನ ಜೊತೆ ಬರಲು ಅವನು ಒಪ್ಪುತ್ತಿಲ್ಲ. 'ಟ್ರಾಯ್‌ನಗರ ಹೀಗೆ ಹೊತ್ತಿ ಉರಿದು ಬೂದಿಯಾಗುತ್ತಿರುವುದನ್ನು ಕಂಡು ನಾನು ನಿನ್ನ ಜೊತೆ ಬಂದು ಪ್ರಾಣ ಉಳಿಸಿಕೊಳ್ಳುವುದೇ? ಕಿರಿಯ ಪ್ರಾಯದ ನಿನ್ನಂಥವನು ತಪ್ಪಿಸಿಕೊಂಡು ಹೋಗಬೇಕು. ನಾನು ಇಲ್ಲೇ ಸಾಯುತ್ತೇನೆ' ಎಂದು ಮುಷ್ಕರ ಹಿಡಿದವನಂತೆ ಮತ್ತೆ ಮತ್ತೆ ಅದೇ ಮಾತಾಡಿದ. ಅದಕ್ಕೆ ನಾನು 'ಅಪ್ಪ! ಪಿರ್ಹಸನು ಈಗ ಇಲ್ಲಿಗೆ ನುಗ್ಗಿ ಬರುತ್ತಾನೆ. ಅವನು ಇದೇ ತಾನೇ ಪ್ರಯಾಮನನ್ನೂ ಕೊಂದ, ಅವನ ಕಣ್ಣೆದುರಿಗೇ ಅವನ ಮಗ ಪೊಲೈಟೀಸನನ್ನೂ ಕೊಂದ. ಇಲ್ಲಿ ನಿನ್ನನ್ನೂ ನನ್ನ ಹೆಂಡತಿ ಮಗನನ್ನೂ ಅವನು ಕೊಂದು ಹಾಕುವವನೇ. ಈಗ ನೀನು ನನ್ನ ಜೊತೆ ಬರುವುದಿಲ್ಲವೆಂದರೆ ನಿನ್ನನ್ನು ಬಿಟ್ಟು ನಾನೊಬ್ಬನೇ ತಪ್ಪಿಸಿಕೊಂಡು ಹೋಗುವುದಿಲ್ಲ. ಇಲ್ಲೇ ನಿಂತು ಶತ್ರುಗಳನ್ನೆದುರಿಸಿ ಹೋರಾಡುತ್ತೇನೆ' ಎಂದು ಹೇಳಿ ಮತ್ತೆ ಕವಚ ಶಿರಸ್ತ್ರಾಣ ಧರಿಸಿ, ಕತ್ತಿ ಈಟಿ ಹಿಡಿದು ಹೋರಾಟಕ್ಕೆ ಸಿದ್ಧನಾಗಿ, ಹೊಸಲು ದಾಟಿ ಹೊರಗೆ ಹೆಜ್ಜೆಯಿಡಬೇಕು ಎನ್ನುವಷ್ಟರಲ್ಲಿ ನನ್ನ ಹೆಂಡತಿ ಕ್ರೀಯೂಸಳು ನಮ್ಮ ಮಗು ಇಯುಲಸನನ್ನು ನನ್ನೆಡೆಗೆ ಎತ್ತಿ ಹಿಡಿದು 'ನೀನು ಮತ್ತೆ ಸಾವಿನ ದವಡೆಗೇ ನುಗ್ಗಿ ಹೋಗುವುದಾದರೆ ಈ ಮಗುವನ್ನು ನನ್ನನ್ನೂ ಜೊತೆಯಲ್ಲೇ ಕರೆದುಕೊಂಡು ಹೋಗು. ನೀನು ಒಬ್ಬನೇ ಹೋಗುವುದಾದರೆ ನಮ್ಮನ್ನು ಯಾರ ವಶಕ್ಕೆ ಒಪ್ಪಿಸಿ ಹೋಗುತ್ತೀಯ?' ಎಂದು ದುಂಬಾಲು ಬಿದ್ದಳು.

ಆಗ ಒಂದು ಆಶ್ಚರ್ಯ ಘಟಿಸಿತು. ನಮ್ಮ ಕಣ್ಣೆದುರಿಗೇ ಇದ್ದ ಮಗು ಇಯುಲಸನ ತಲೆಯ ಮೇಲೆ ಒಂದು ಬೆಂಕಿಯ ಜ್ವಾಲೆ ಕಾಣಿಸಿಕೊಂಡು ಸುತ್ತಲೂ ಬೆಳಕು ಚೆಲ್ಲುತ್ತ ಉರಿಯತೊಡಗಿತು. ನಾವು ಭಯಗೊಂಡು ಅವನ ತಲೆಯ ಮೇಲೆ ನೀರು ಚೆಲ್ಲಿ ಆ ಉರಿಯನ್ನು ನಂದಿಸಲು ಪ್ರಯತ್ನಪಟ್ಟೆವು. ಮಗುವಿನ ತಲೆಯ ಮೇಲೆ ಆ ಪವಿತ್ರಾಗ್ನಿಯನ್ನು ಕಂಡ ನನ್ನ ತಂದೆ ಆಶ್ಚರ್ಯಗೊಂಡು ಆಕಾಶದ ಕಡೆಗೆ ಎರಡೂ ಕೈ ಎತ್ತಿ ಹಿಡಿದು, 'ತಂದೆ, ಜೋವ್ ದೇವತೆಯೇ! ನಮ್ಮನ್ನು ಕರುಣೆಯಿಂದ ಕಾಪಾಡು, ನಾವಿಲ್ಲಿ ಕಾಣುತ್ತಿರುವ ಈ ಬೆಂಕಿಯ ಶುಭಶಕುನವನ್ನು ನಮ್ಮ ಪಾಲಿಗೆ ಗಟ್ಟಿಗೊಳಿಸು' ಎಂದು ಪ್ರಾರ್ಥಿಸಿದ. ಆಗ ನಮ್ಮ ಎಡಗಡೆ ಗುಡುಗಿನ ಶಬ್ದವಾಯಿತು. ಆಕಾಶದಿಂದ ಜಾರಿದ ಒಂದು ನಕ್ಷತ್ರ ಬೆಳಕು ಬೀಳುತ್ತ ನಮ್ಮ ಮನೆಯ ಮೇಲ್ಛಾವಣಿಯಲ್ಲಿ ಹಾದು ಇಡಾ ಪರ್ವತದ ಮೇಲೆ ಬಿದ್ದಿತು. ಆಗ ನನ್ನ ತಂದೆಯು 'ಈ ಶುಭಶಕುನವನ್ನು ಕಂಡ ಮೇಲೆ ನಾನಿನ್ನು ತಡಮಾಡುವುದಿಲ್ಲ. ಓ, ನಮ್ಮ ನಾಡಿನ ದೇವತೆಗಳೇ! ನನ್ನ ಮನೆಯನ್ನು ಉಳಿಸಿ, ನಮ್ಮ ಮೊಮ್ಮಗುವನ್ನು ಉಳಿಸಿ' ಎಂದು ಪ್ರಾರ್ಥಿಸಿಕೊಂಡು, ನನ್ನ ಕಡೆ ತಿರುಗಿ, 'ಮಗನೇ, ನಾನೀಗ ನಿನ್ನ ಜೊತೆ ಬರಲು ಸಿದ್ಧನಾಗಿರುವೆ' ಎಂದು ಹೇಳಿದ. ಇಷ್ಟು ಹೊತ್ತಿಗೆ ಟ್ರಾಯ್‌ನಗರದ ಬೀದಿಬೀದಿಗಳಲ್ಲಿ ಮನೆ ಮನೆಗೂ ಬೆಂಕಿಬಿದ್ದು ಗಗನದೆತ್ತರಕ್ಕೆ ಜ್ವಾಲೆ ಎದ್ದು ತನ್ನ ಕೆನ್ನಾಲಿಗೆಗಳನ್ನು ಚಾಚುತ್ತ ಉರಿಯುತ್ತಿದ್ದು, ಬೆಂಕಿಯ ಕಾವು ನಾವಿದ್ದ ದೂರಕ್ಕೂ ರಾಚುತ್ತಿತ್ತು. ಆಗ ನಾನು ನನ್ನ ಸೇವಕರನ್ನು ಕುರಿತು 'ನಾವೆಲ್ಲರೂ ಇಲ್ಲಿಂದ ಹೊರಟು ಟ್ರಾಯ್‌ನಗರದಿಂದ ಮುಂದೆ ಇರುವ ಸೀರೀಸ್ ದೇವತೆಯ ಮಂದಿರದ ಹತ್ತಿರ ಸೈಪ್ರಸ್ ಮರದ ಬಳಿ ಒಟ್ಟು ಸೇರೋಣ' ಎಂದು ಹೇಳಿ, ತಂದೆಯನ್ನು ಕುರಿತು, 'ತಂದೆಯೇ, ನಮ್ಮ ನಾಡಿನ

ದೇವತೆಗಳ ವಿಗ್ರಹವಿರುವ ಈ ಸಂಪುಟವನ್ನು ನಿನ್ನ ಕೈಗೆ ತೆಗೆದುಕೊ. ಈಗ ತಾನೆ ಯುದ್ಧರಂಗದಿಂದ ಬಂದು ನನ್ನ ಮೈಕೈಯೆಲ್ಲ ರಕ್ತಮಯವಾಗಿದೆ. ನಾನು ನೀರಿನಲ್ಲಿ ಮೈತೊಳೆದುಕೊಂಡು ಶುದ್ಧನಾದ ಹೊರತು ಈ ಸಂಪುಟವನ್ನು ಹಿಡಿಯಬಾರದು' ಎಂದು ಹೇಳಿ ಅದನ್ನು ಅವನ ಕೈಗೆ ಕೊಟ್ಟು, ಅವನನ್ನು ನನ್ನ ಹೆಗಲ ಮೇಲೆ ಕೂರಿಸಿಕೊಂಡು, ಮಗುವಿನ ಕೈಹಿಡಿದು ಮುಂದೆ ಮುಂದೆ ಹೆಜ್ಜೆಹಾಕಿದೆ. ನನ್ನ ಹೆಂಡತಿ ಕ್ರೇಯೂಸ ನನ್ನನ್ನು ಹಿಂಬಾಲಿಸಿದಳು.

ಅದುವರೆಗೂ ಶತ್ರುಗಳ ಕಡೆಯಿಂದ ಬರುತ್ತಿದ್ದ ಬಾಣಗಳಿಗಾಗಲಿ ಅವರು ಹೊತ್ತಿಸಿದ ಬೆಂಕಿಗಾಗಲಿ ಕಿಂಚಿತ್ತು ಹೆದರದಿದ್ದವನು ಈಗ ಈ ರಕ್ಷಣೆಯ ಭಾರ ಬಿದ್ದ ಮೇಲೆ ನಿಜಕ್ಕೂ ನನಗೆ ಭಯವಾಗಿ ಮೈ ನಡುಗಿತು. ನಾನು ಮರಗಿಡಗಳ ಮರೆಯಲ್ಲಿ ಕತ್ತಲೆಯಲ್ಲಿ ದಾರಿ ಹಿಡಿದು ಮುಂದೆ ನಡೆದೆ. ಇನ್ನೇನು ಊರಿನ ಗಡಿದಾಟಿ ಮುಂದೆ ಹೋಗಬೇಕು ಎನ್ನುವಷ್ಟರಲ್ಲಿ ಶತ್ರುಗಳ ಪಡೆ ಧಡಗುಟ್ಟಿಕೊಂಡು ಹತ್ತಿರ ಬಂದ ಶಬ್ದವಾಯಿತು, ನನ್ನ ಹೆಗಲ ಮೇಲೆ ಕುಳಿತಿದ್ದ ತಂದೆ ಕತ್ತಲೆಯನ್ನು ಭೇದಿಸಿಕೊಂಡು ದೃಷ್ಟಿ ಹರಿಸಿ ನೋಡಿ, 'ಮಗನೇ ! ಶತ್ರುಗಳು ಹತ್ತಿರವೇ ಬಂದುಬಿಟ್ಟರು, ವೇಗವಾಗಿ ನಡಿ' ಎಂದು ಚುರುಕು ಮಾಡಿದ. ನಾನು ಅವರಿಂದ ತಪ್ಪಿಸಿಕೊಳ್ಳಲು ದಾರಿ ಬಿಟ್ಟು, ದಾರಿಯಿಲ್ಲದ ಕಡೆ ದಾರಿ ಮಾಡಿಕೊಂಡು ಎಲ್ಲೆಲ್ಲೊ ಸುತ್ತಿ ಸುಳಿದು ಆ ಕತ್ತಲೆಯಲ್ಲಿ ಮುಂದೆ ಹೋಗುತ್ತಿದ್ದೆ. ಆಗ ನನ್ನ ದುರದೃಷ್ಟದಿಂದ ನನ್ನ ಹೆಂಡತಿ ನನ್ನಿಂದ ತಪ್ಪಿಸಿಕೊಂಡಳು. ಅದು ಹೇಗಾಯಿತೊ ನಾನು ಕಾಣೆ. ಅವಳೇನು ಹಾದಿಯಲ್ಲಿ ತಡೆದು ನಿಂತಳೊ, ದಾರಿ ತಪ್ಪಿ ಬೇರೆಡೆ ಹೋದಳೊ, ಆಯಾಸಗೊಂಡು ಕುಸಿದು ಬಿದ್ದಳೊ, ಅಂತೂ ನಾನು ಅವಳನ್ನು ಮತ್ತೆ ನೋಡಲಿಲ್ಲ. ನನ್ನ ಬೆನ್ನ ಹಿಂದೆ ಬರುತ್ತಿದ್ದಾಳೆಂದೇ ತಿಳಿದು ನಾನು ವೇಗವಾಗಿ ನಡೆಯುತ್ತ ಸೀರೀಸ್ ದೇವತೆಯ ಮಂದಿರದ ಮುಂದಿನ ಸೈಪ್ರಸ್ ಮರದ ಕೆಳಗೆ ಬಂದೆ. ಅಲ್ಲಿ ಬೇರೆ ಬೇರೆ ದಾರಿ ಹಿಡಿದು ಬಂದ ನನ್ನ ಸೇವಕರು, ಪರಿಜನರು, ಸೈನಿಕರು ಒಟ್ಟಾಗಿ ಸೇರಿದ್ದರು. ಆಗಲೇ ನನಗೆ ಗೊತ್ತಾದುದು, ಕ್ರೇಯೂಸ ಬಂದಿಲ್ಲ ಎಂಬುದು. ನಾನು ನನ್ನ ಅದೃಷ್ಟವನ್ನು ಹಳಿಯುತ್ತ, ನನ್ನ ಮಗುವನ್ನೂ ತಂದೆಯನ್ನೂ ದೇವರ ಸಂಪುಟವನ್ನೂ ನನ್ನ ಗೆಳೆಯರ ಕೈಗೆ ಒಪ್ಪಿಸಿ, ಪುನಃ ಯುದ್ಧ ವೇಷವನ್ನು ಧರಿಸಿ ಹೆಂಡತಿಯನ್ನು ಹುಡುಕಿಕೊಂಡು ನಗರದ ಕಡೆಗೆ ಹೆಜ್ಜೆ ಹಾಕಿದೆ. ನಾನು ಬಂದ ದಾರಿಯಲ್ಲೇ ಹಿಂದಿರುಗಿ ಹೋಗುತ್ತ ಕ್ರೇಯೂಸಳಿಗಾಗಿ ಹುಡುಕಿದೆ. ಎಲ್ಲೂ ಅವಳು ಕಾಣಲಿಲ್ಲ. ಊರಿನಲ್ಲಿ ಕೆಲವು ಕಡೆ ಯಾರೊಬ್ಬರೂ ಜೀವಂತವಾಗಿಲ್ಲದೆ, ಎಲ್ಲ ಕಡೆಯೂ ಹೆಣಗಳು ಬಿದ್ದು, ಭೀಕರ ಮೌನ ತಾಂಡವವಾಡುತ್ತಿತ್ತು. ನನ್ನ ಹೆಂಡತಿ ಪುನಃ ನಮ್ಮ ಮನೆಗೇನಾದರೂ ಹೋಗಿರುವಳೇನೊ ಎಂದು ಆ ಕಡೆಗೆ ತಿರುಗಿದೆ. ಅಲ್ಲಿ ಗ್ರೀಕರು ನಮ್ಮ ಮನೆಯ ಬಾಗಿಲು ಮುರಿದು ಒಳಗೆ ತುಂಬಿಕೊಂಡಿದ್ದರು. ಮನೆಗೆ ಬೆಂಕಿ ಬಿದ್ದು ಮೇಲ್ಛಾವಣಿ ಹೊತ್ತು ಉರಿಯುತ್ತಿತ್ತು. ನಾನು ಅಲ್ಲಿಂದ ಪ್ರಯಾಮನ ಅರಮನೆಯ ಬಳಿಗೆ ಬಂದೆ. ಅಲ್ಲಿ ಗ್ರೀಕ್ ಸೈನಿಕರು ಕೈಗೆ ಸಿಕ್ಕಿದ್ದನ್ನೆಲ್ಲ ಲೂಟಿ ಹೊಡೆಯುತ್ತಿದ್ದರು. ಫೀನಿಕ್ಸ್ ಮತ್ತು ಯೂಲಿಸಿಸ್ಸರು ಅದರ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದರು. ದೇವಮಂದಿರಗಳಿಂದ, ಅರಮನೆಯ ಭಂಡಾರದಿಂದ ಲೂಟಿ ಹೊಡೆದ ಬಂಗಾರದ ಪೀಠೋಪಕರಣಗಳು, ಬಂಗಾರದ ಪಾತ್ರೆಗಳು, ಇತರ ಸಮಸ್ತ ಒಡವೆ ವಸ್ತುಗಳು ಅಲ್ಲಿ ರಾಶಿರಾಶಿಯಾಗಿ ಬಿದ್ದಿದ್ದುವು. ಶತ್ರುಗಳು ಸೆರೆ ಹಿಡಿದ ಟ್ರೋಜನ್ ಸ್ತ್ರೀಯರು ಮಕ್ಕಳು ಭಯದಿಂದ ನಡುಗುತ್ತ ಅಲ್ಲೊಂದೆಡೆ ಮುದುರಿ ನಿಂತಿದ್ದರು.

ನಾನು ಆ ಅರೆಮರ ಕತ್ತಲೆಯಲ್ಲೇ ತಡಕಾಡುತ್ತ, ನನ್ನ ಇರವು ಶತ್ರುಗಳಿಗೆ ಗೊತ್ತಾಗುತ್ತದೆ ಎಂಬುದನ್ನು ಲೆಕ್ಕಿಸದೆ ನನ್ನ ಹೆಂಡತಿಯ ಹೆಸರು ಹಿಡಿದು ಗಟ್ಟಿಯಾಗಿ ಕೂಗಿದೆ. ಹುಚ್ಚನಂತೆ ಅತ್ತಿತ್ತ ಓಡುತ್ತ ಮತ್ತೆ ಮತ್ತೆ ಕೂಗಿದೆ. ಆಗ, ಏನೆಂದು ಹೇಳೋಣ! ನನ್ನ ಕಣ್ಣೆದುರಿಗೆ ನನ್ನ ಹೆಂಡತಿಯ ಪ್ರತಿಮೂರ್ತಿ ಕಾಣಿಸಿಕೊಂಡಂತಾಯಿತು. ಅವಳು ಜೀವಿಸಿದ್ದಾಗ ಹೇಗಿದ್ದಳೊ ಅದಕ್ಕಿಂತಲೂ ಎತ್ತರ ಗಾತ್ರವಾಗಿ ಕಂಡ ಆ ಛಾಯಾಮೂರ್ತಿಯನ್ನು ನೋಡಿ ಭಯದಿಂದ ನನ್ನ ಮೈಗೂದಲು ನಿಮಿರಿ ನಿಂತವು. ನಾಲಿಗೆ ಅಂಗುಳಿಗೆ ಅಂಟಿಕೊಂಡಿತು. ಆಗ ಅವಳೇ ನನಗೆ ಸಮಾಧಾನ ಹೇಳುತ್ತ 'ಏಕೆ ಹೀಗೆ ದುಃಖಿಸುತ್ತಿದ್ದೀಯ ಈನೀಯಸ್? ಇದೆಲ್ಲವೂ ಸ್ವರ್ಗದ ದೇವತೆಗಳ ಇಚ್ಛೆಯಂತೆಯೇ ನಡೆಯುತ್ತಿದೆ. ನಾನು ನಿನ್ನ ಜೊತೆ ಬರುವುದು ವಿಧಿಯ ಇಚ್ಛೆಯಲ್ಲಿಲ್ಲ. ನೀನಿನ್ನೂ ಹಲವು ವರ್ಷಗಳ ಕಾಲ ನೆಲೆ ಕಾಣದೆ ವಿಸ್ತಾರವಾದ ಸಮುದ್ರದಲ್ಲಿ ಅಲೆಯಬೇಕು. ಮುಂದೆ ನೀನು ಹಸ್ಪೀರಿಯ ದೇಶಕ್ಕೆ ಹೋಗುವೆ. ಅಲ್ಲಿ ಟೈಬರ್ ನದೀ ತೀರದ ಫಲವತ್ತಾದ ರಾಜ್ಯದಲ್ಲಿ ಒಬ್ಬ ರಾಜಕುಮಾರಿ ನಿನಗಾಗಿ ಕಾದು ನಿಂತಿದ್ದಾಳೆ. ನೀನಿನ್ನು ಈ ಕ್ರೀಯೂಸಳಿಗಾಗಿ ಕಣ್ಣೀರು ಹಾಕುವುದನ್ನು ನಿಲ್ಲಿಸು. ನಾನು ಯಾವ ಶತ್ರುಗಳ ಕೈಗೆ ಸಿಕ್ಕಿ ಯಾವ ಗ್ರೀಕನ ಮನೆಯಲ್ಲೂ ಗುಲಾಮಳಾಗಿ ಚಾಕರಿ ಮಾಡಿಕೊಂಡಿರಬೇಕಿಲ್ಲ ಎಂಬ ಸಮಾಧಾನವಿದೆ ನನಗೆ. ಇನ್ನು ನಿನಗೆ ಶುಭವಾಗಲಿ ಎಂದು ಹಾರೈಸುತ್ತೇನೆ. ನನ್ನ ಮೇಲೆ ಮತ್ತು ನಮ್ಮ ಮಗುವಿನ ಮೇಲೆ ನಿನ್ನ ಪ್ರೀತಿ ಅಖಂಡವಾಗಿರಲಿ' ಎಂದು ಹೇಳುತ್ತ ಗಾಳಿಯಲ್ಲಿ ತೇಲಿಹೋದಳು. ನಾನು ಅವಳಿಗೆ ಸಾವಿರ ವಿಷಯ ಹೇಳುವುದಿತ್ತು. ಆದರವಳು ನಿಲ್ಲದೆ ಕರಗಿಹೋದಳು. ನಾನು ಅವಳನ್ನು ತಬ್ಬಿ ಹಿಡಿಯಲೆಂದು ಮೂರು ಸಲ ಪ್ರಯತ್ನಪಟ್ಟೆ. ಆದರೆ ಆಗಲಿಲ್ಲ.

ಅಲ್ಲಿಗೆ ರಾತ್ರಿಯ ಬಹುಭಾಗ ಕಳೆದಿತ್ತು. ಅನಂತರ ನಾನು ಖಿನ್ನವಾಗಿ ಬಂದು ನನ್ನ ಜೊತೆಗಾರರನ್ನು ಕೂಡಿಕೊಂಡೆ. ನಾನು ಅಲ್ಲಿಗೆ ಬರುವ ಹೊತ್ತಿಗೆ ಇನ್ನೂ ಬಹಳ ಜನ ಹೆಂಗಸರೂ ಗಂಡಸರೂ ಅಲ್ಲಿ ಬಂದು ಸೇರಿದ್ದರು. ಅವರೂ ನೆಲೆಯಿಲ್ಲದೆ ನನ್ನ ಜೊತೆ ಎಲ್ಲಿಗಾದರೂ ಸರಿ– ಸಮುದ್ರವಾದರೆ ಸಮುದ್ರ, ಭೂಮಿಯಾದರೆ ಭೂಮಿ ಹೀಗೆ ಎಲ್ಲಿಗೆ ಬರಲೂ ಸಿದ್ಧವಾಗಿದ್ದರು. ಅಷ್ಟು ಹೊತ್ತಿಗೆ ಬೆಳಕು ಹರಿಯುವ ಸಮಯ. ಇಡಾ ಪರ್ವತದ ಎತ್ತರದ ಶಿಖರದ ಮೇಲೆ ಬೆಳ್ಳಿ ನಕ್ಷತ್ರ ಕಾಣುತ್ತಿತ್ತು. ಟ್ರಾಯ್‌ನಗರವನ್ನು ವಶಪಡಿಸಿಕೊಂಡ ಗ್ರೀಕ್ ಕಾವಲುಪಡೆಯವರು ಕೋಟೆಯ ಬಾಗಿಲುಗಳನ್ನು ಹಾಕುತ್ತಿದ್ದರು. ನಾವು ಮರಳಿ ಅಲ್ಲಿಗೆ ಹೋಗುವಂತಿರಲಿಲ್ಲ. ನಾನು ನನ್ನ ತಂದೆಯನ್ನು ಮತ್ತೆ ಹೆಗಲ ಮೇಲೆ ಕೂರಿಸಿಕೊಂಡು ಜೊತೆಗಾರರೊಡನೆ ಮುಂದಿನ ದಾರಿ ಹಿಡಿದು ಹೊರಟೆ.

* * *

# ಅಮ್ಮನ ಮುಖ

ತಮಿಳು ಮೂಲ : ಪಾವಣ್ಣನ್
ಅನು : ಚಿಂತಾಮಣಿ ಕೊಡ್ಲೆಕೆರೆ

ಒಣಗಿದ ಕೆರೆಯೊಳಗೆ ಕಂಬು*ವ ಹೊಲ
ಕಾವಲು ಕೂತ ಮಗನಿಗೆ
ಬುತ್ತಿ ತರುವಳು ಅಮ್ಮ

ಉಂಡ ಮಗನಿಗೆ ಅಲ್ಲೆ ನಿದ್ದೆಜೊಂಪು
ಉಳಿದ ಗಂಜಿ ನೀರನ್ನು
ಕುಡಿಯುವಳು ಅವಳು

ಅವಳು ಮಲಗುವುದಿಲ್ಲ
ಬುಟ್ಟಿ ಹೊತ್ತು
ಸೆಗಣಿಗಾಗಿ
ಬರಿಗಾಲಲ್ಲಿ ಅಲೆಯುವಳು

ಹುಡುಗ
ನೀರು ತರುವನು ಅಲ್ಲೆ
ಹೊಂಡದಿಂದ
ಮಡಕೆಯ ಮುಚ್ಚಿದ ತೂತುಗಳಿಂದ
ನೀರು ಒಸರುವುದು

ಈಗ ಸೆಗಣಿ ತುಳಿಯುವರು
ಹುಡುಗ ಮಾಡಿಕೊಟ್ಟ
ಸೆಗಣಿಯುಂಡೆಗಳನ್ನು

---

* ಕಂಬು : ತಮಿಳುನಾಡಿನ ಕೆಲವು ಪ್ರದೇಶಗಳಲ್ಲಿ ನೀರಿಲ್ಲದ ಜಾಗದಲ್ಲಿ ಬೆಳೆಯುವ ಒಂದು ಧಾನ್ಯ.

ತಟ್ಟುವಳು ಅಮ್ಮ
ಬೆರಣಿಗಳ ಮೇಲೆ ಅವಳ ಬೆರಳಚ್ಚು

'ಈ ಸಲವಾದರೂ ಬೆರಣಿ ಮಾರಿ
ಪೆನ್ನು ಕೊಡಿಸುತ್ತೇನೆ ನನ್ನ ಚಿನ್ನಾರಿ'

ಹುಡುಗನ ಕನಸಲ್ಲಿ ಹೊಸ ಪೆನ್ನು
ತಿಳಿದೂ ತಿಳಿದೂ ಅವನಿಗೆ ಸುಳ್ಳು ಹೇಳಿದ್ದಷ್ಟು
ನೆನೆದು ನೋಯುವಳು ತಾಯಿ
ಕತ್ತಲಲಿ ಮನೆಯತ್ತ ಈರ್ವರ ಸವಾರಿ

★ ★ ★

'ಹೆಸರಿಗೆ ದರ್ಜಿಯ ಮಡದಿ
ಹೊಸ ಬಟ್ಟೆಯಿರಲಿ
ಹರಿದದ್ದು ಹೊಲಿಯಲೂ ನನಗೆ ಗತಿಯಿಲ್ಲ'

'ಮಡಕೆ ಬಳಸಲು ಭಯ.
ಐದು ರೂಪಾಯಿಗೆ ಒಂದು ಅಲ್ಯುಮಿನಿಯಂ ಪಾತ್ರೆ
ಸಾವಿರ ಸಲ ಹೇಳಿದರೂ ಏನು ಉಪಯೋಗ?
ತರುವ ಲಕ್ಷಣ ಇಲ್ಲ'

'ಬೆರಣಿ ಮಾರಿದ ಕಾಸು
ಎಲೆಯಡಿಕೆ, ಲಂಗ ರವಿಕೆಗೆ ಸರಿ
ಪುಸ್ತಕ, ಪೆನ್ನು ತರಲು
ಇನ್ನಾವ ಪರಿ?
ಹೊಟ್ಟೆಪಾಡಿಗೇ ಎಲ್ಲ ಖರ್ಚು!'

'ನಡು ನೋವು - ಎದ್ದರೆ, ಕೂತರೆ
ಎಳಂಗಾಡದ ವೈದ್ಯ 'ಹಾಲು ಕುಡಿ' ಎನ್ನುವನು
ದಿನಾಲೂ ಹಾಲು ಕುಡಿಯಲು ನಾನು
ನೋಟು ಅಚ್ಚು ಮಾಡುತ್ತೇನೇನು?'

'ಕಾಶಿ, ರಾಮೇಶ್ವರ ಬೇಡ
ಮೂರೇ ಮೈಲು ದೂರದಲ್ಲಿದೆ ಅಮ್ಮನ ಗುಡಿ
ಏಳು ವರ್ಷಗಳಿಂದ ಕೇಳ್ತಾನೇ ಇದೇನೆ

ಹೊಲಿಗೆ ಮಿಷಿನ್ನೊಟ್ಟಿಗೆ ಹೊಲಿದು ಬಿಟ್ಟಿದ್ದಾರಾ-
ಈ ಮನುಷ್ಯನ್ನ!
ಹೋಗೋಣ ಎನ್ನಲು ಬಾಯೇ ಇಲ್ಲ'!

ಅಮ್ಮನ ಸಣ್ಣಸಣ್ಣ ಆಸೆಗಳು
ಮೀನಿನ ಮೊಟ್ಟೆಗಳಂತೆ
ಬಡತನ ನುಂಗಿದ ಬದುಕು
ಒಂದೆರಡಕ್ಕೂ ಗತಿ ಇಲ್ಲದಂತೆ......

★ ★ ★

ಸದ್ದು ಅಡಗಿದ ರಾತ್ರಿ
ಅಪ್ಪ ಬರುವುದು ತಡವೇ-ಯಾವಾಗಲೂ
ಚಂದ್ರಾಮ ಮುಟ್ಟಿದಾ ಹೊಸ್ತಿಲಲ್ಲಿ
ಚಾಪೆ ಹಾಸಿದೆ
ಅಮ್ಮನ ತೊಡೆ ಮೇಲೆ ತಲೆಯಿಟ್ಟು ಮಗ
ಕಾಲ ಮೇಲೆ ಕವುಚಿ ತಂಗಿ

ಕರ್ಣನಕಥೆ ಮಗನಿಗೆ ಇಷ್ಟ
ಮತ್ತೆ ಮತ್ತೆ ಹೇಳುವಳು ಅಮ್ಮ
ಕುಳ್ಳ ನರಿಯ ಕಥೆ,ಮೆಣಸಿನ ಕಾಯಿಯ ಕಥೆ,
ಏಡಿ ಕೊಕ್ಕರೆಯ ಕಥೆ-
ಮಗಳಿಗೆ ಮೀಸಲು

ಸಾಕಾಗಿ ಮಲಗುವಳು ಹುಡುಗಿ
ಇನ್ನೂ ಕಥೆ ಬೇಕೆನ್ನುವ ಹುಡುಗ
ನಗುತ್ತಲೇ ಮುಂದುವರಿಸುವಳು ಅಮ್ಮ
ಚಿಗುರಿನಂಥ ಬೆರಳುಗಳ ಹಿಡಿದು
ತುಂಬಿದ ಕಣ್ಣುಗಳಿಂದ ಹೇಳುವಳು ಅಮ್ಮ

'ಈ ಕೈಗಳೇನು ನನ್ನ ಕಾಪಾಡುವುದು?
ಈ ಕೈಗಳೇನು ಗಂಜಿ ಉಣಿಸುವುದು?
ಈ ಕೈಗಳೇನು ಸಂತಸ ತುಂಬಿ ತರುವುದು?'

ಐದನೇ ವರ್ಷದಲಿ ಕೇಳಿದೀ ನುಡಿಗಳು
ಮೊಳೆ ಹೊಡೆದ ಹಾಗೆ ಈ ಮನದಲ್ಲಿ ಉಳಿದವು

★ ★ ★

ಊರಲ್ಲಿ ಎಸ್ಸೆಲ್ಸಿ
ಪಕ್ಕದೂರಲ್ಲಿ ಪಿಯುಸಿ

ಸಂಸಾರದಲ್ಲಿ ನೂರಾರು ಚಿಂತೆ
ಓದುವಾಸೆ ಒಡೆಯಿತು ಗುಳ್ಳೆಯಂತೆ

'ಸಾಕು ಓದಿದ್ದು- ಅಂಗಡಿಗೆ ಕಳಿಸೇ
ಕೆಲಸ ಕಲಿಯಲಿ ಅವನು'

ಅಪ್ಪನ ದನಿಯಲ್ಲಿ ಅಸಹಾಯಕತೆ
ಮಗನ ಪರ ಅಮ್ಮ
ರಗಳೆ : ರಾತ್ರಿ ಎಲ್ಲ

'ನೀನಾದರೂ ಬಗ್ಗಿ ನಡೆ ಮಗು'
ಅತ್ತು ಸೋಲೊಪ್ಪಿದ ಹುಡುಗ

ಆಷಾಢದ ಹಬ್ಬಕ್ಕೆ
ಚಿತ್ತಣೆಯಲ್ಲಿ ಸಿಕ್ಕ ಮಾವ ನುಡಿದ
'ಆಸೆಪಡುತಿದ್ದಾನೆ, ಕಲಿಯಲಂತೆ
ನಮ್ಮ ಮನೆಯಲ್ಲಿರಲಿ ಏನು ಚಿಂತೆ?'
ಅಪ್ಪನದು ಒಪ್ಪಿದ ಮೌನ

ಮೂಗುತಿ, ಉಂಗುರ, ಬಳೆ
ಒತ್ತೆಯಿಟ್ಟು ಹಣ ತಂದಳು
ಮಗನ ಎಳೆಗೈ ಹಿಡಿದು
ಬಿಕ್ಕುತ್ತ ನುಡಿವಳು :

'ಎಂಟು ಮಕ್ಕಳು ಇರುವ ಮನೆ
ಒಂಬತ್ತನೆಯವನಾಗಿ ಇರಬೇಕು
ಎಲ್ಲರೊಟ್ಟಿಗೂ ಪ್ರೀತಿಯಿಂದಿರು
ಪ್ರೀತಿ ಮೊದಲ ಶಿಕ್ಷಣ
ಪದವಿ ಓದು – ಮರುಕ್ಷಣ

* * *

# ಒಂದು ಗುಟುಕು ನೀರು

ತಮಿಳು ಮೂಲ : ಪಾವಣ್ಣನ್
ಅನು : ಚಿಂತಾಮಣಿ ಕೊಡ್ಲೆಕೆರೆ

ಒಂದು ಗುಟುಕು ನೀರು ಸಾಕು
ಕುಡಿದು ಹೊರಡುವೆ
ಈ ದಾರಿಯಲೀ ಅವಸ್ಥೆ !
ಅರಿಯದೆ ಹೋದೆ

ದಟ್ಟ ಕಾಡು ದಿಟ್ಟ ಸೆಳೆದು
ಹೊರಟು ಬಿಟ್ಟೆನು
ನೀರಿಲ್ಲದೆ ಇಂಥ ಹಸುರೆ
ಗಿಡಕೆ, ಬಳ್ಳಿಗೆ?

ನೀರ ಸೆಲೆಯು ಎಲ್ಲಿರುವುದೊ
ಹುಡುಕುತಲಿರುವೆ
ನೀರ ನೆಲೆಯ ತೋರಿಸುವೆಯ
ಕಾಡು ಹಕ್ಕಿಯೆ?

ಪುನಃ ರೆಕ್ಕೆ ಕುಣಿಸುತಿವೆ
ಕನಸು ನನ್ನವು
ಒಂದು ಗುಟುಕು ನೀರು ಸಿಗಲಿ
ಕುಡಿದು ನೆಗೆವುವು

* * *

*(ಪಾವಣ್ಣನ್ (೧೯೫೮) ತಮಿಳಿನ ಹೊಸ ಬರಹಗಾರರಲ್ಲಿ ಅಗ್ರಪಂಕ್ತಿಯವರು. ಕತೆ, ಕವಿತೆ, ಕಾದಂಬರಿ - ಪ್ರಕಾರಗಳಲ್ಲಿ ಹದಿನಾಲ್ಕು ಕೃತಿಗಳನ್ನು ಪ್ರಕಟಿಸಿದ್ದಾರೆ. ೧೯೯೭ರ 'ಕಥಾ ಪ್ರಶಸ್ತಿ'ಯೂ ಇವರಿಗೆ ಸಂದಿದೆ. ಕನ್ನಡದ ಬಹುಪಾಲು ಹಿರಿಯ ಲೇಖಕರನ್ನು, ಹೊಸ ಲೇಖಕರನ್ನು, ಇಲ್ಲಿನ ದಲಿತ ಬರವಣಿಗೆಯನ್ನು ಪೂರ್ಣ ಪ್ರಮಾಣದಲ್ಲಿ ತಮಿಳಿಗೆ ಪರಿಚಯಿಸಿದ, ಪರಿಚಯಿಸುತ್ತಿರುವ ಶ್ರೇಯಸ್ಸು ಪಾವಣ್ಣನ್‌ರದು. ಪ್ರಸ್ತುತ, ಬೆಂಗಳೂರಿನಲ್ಲಿ ದೂರಸಂಪರ್ಕ ಇಲಾಖೆಯಲ್ಲಿ ಸಬ್‌ಡಿವಿಷಿನಲ್ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. )*

# ಹಿಂದಿಯ ಮಹಾಕವಿ 'ನಿರಾಲಾ' ಒಂದು ಕ್ರಾಂತಿಕಾರಿ ವ್ಯಕ್ತಿತ್ವ

ಡಾ || ಟಿ. ಜಿ. ಪ್ರಭಾಶಂಕರ 'ಪ್ರೇಮಿ'

ಸೂರ್ಯಕಾಂತ ತ್ರಿಪಾಠಿ 'ನಿರಾಲಾ'ರವರು ಹಿಂದಿ ಕಾವ್ಯಜಗತ್ತಿಗೆ ಕಾಲಿಟ್ಟಿದ್ದೇ ಒಂದು ವಿಲಕ್ಷಣ ಘಟನೆ. ಅವರು ಕೇವಲ ಕವಿ, ಕತೆಗಾರ ಅಥವಾ ಕಾದಂಬರಿಕಾರರಾಗಿಯೇ ಅಲ್ಲ, ಒಬ್ಬ ಸದಾ ಸಂಘರ್ಷಶೀಲ ವ್ಯಕ್ತಿತ್ವವಾಗಿ ಹಿಂದಿ ಜಗತ್ತಿನಲ್ಲಿ ಅವಿಸ್ಮರಣೀಯರಾಗಿದ್ದಾರೆ. ಅವರದು ಕಬೀರನಂತೆ ಹಟಸಾಧನೆಯ ಮತ್ತು ಯಾರಿಗೂ ತಲೆಬಾಗದ ಬಹು ಎತ್ತರದ ವ್ಯಕ್ತಿತ್ವ. ಆದರೆ ಅವರು ಅಷ್ಟೇ ದಯಾಳು. ನಿರ್ಗತಿಕರನ್ನು ಕಂಡರೆ ತನ್ನಲ್ಲಿ ಇದ್ದುದನ್ನು ಹಿಂದೆ ಮುಂದೆ ನೋಡದೆ ದಾನಮಾಡುತ್ತಿದ್ದಂತಹ ಕರುಣಾಳು. ಒಂದು ರೀತಿಯಲ್ಲಿ ಅವರ ಬದುಕು ಮತ್ತು ಬರಹ ಅನೇಕ ದ್ವಂದ್ವಗಳಿಂದ ಕೂಡಿದಂತಹುದು. ಆದ್ದರಿಂದಲೇ ಅವರು ಹಿಂದಿ ಜಗತ್ತಿನಲ್ಲಿ 'ನಿರಾಲಾ' ಅಥವಾ ವಿಲಕ್ಷಣರಾಗಿಯೇ ಉಳಿದರು. ಅವರು ದಾರಿದ್ರ್ಯವನ್ನು ಹೊದ್ದು, ಪ್ರಯಾಗದ ಗಲ್ಲಿ ಗಲ್ಲಿಗಳಲ್ಲಿ ಹುಚ್ಚನಂತೆ ಅಲೆಯುತ್ತಿದ್ದ ಆ 'ಆವಾರಾ-ಮಸೀಹಾ' ಅಥವಾ 'ನಿರಾತಂಕ ಮಹಾಮಾನವ' ವ್ಯಕ್ತಿತ್ವ ಹಿಂದಿ ಪ್ರೇಮಿಗಳ ಮನಃಪಟಲದಲ್ಲಿ ಇಂದೂ ಅಚ್ಚಳಿಯದೇ ಇದೆ. 'ನಿರಾಲಾ'ರ ಮಹಾನ್ ವ್ಯಕ್ತಿತ್ವವನ್ನು ಕಂಡು ರಾಹುಲ ಸಾಂಕೃತ್ಯಾಯನರು ಆಡಿದ ಶಬ್ದಗಳು ಸ್ಮರಣೀಯವಾದವು. ''ಅಶ್ವಘೋಷ, ಕಾಳಿದಾಸ, ಭವಭೂತಿಗಳ ಸಾಹಿತ್ಯ ಓದುವಾಗ ಈ ಮಹಾನ್ ಸಾಹಿತಿಗಳನ್ನು ಈ ಕಂಗಳಿಂದ ನೋಡುವ ಭಾಗ್ಯ ಸಿಕ್ಕಿದ್ದರೆ ಎಂದು ಯೋಚಿಸುತ್ತೇವೆ. ಇದು ನನ್ನ ಸೌಭಾಗ್ಯವೇ ಅನ್ನಿ ನಾನು 'ನಿರಾಲಾ'ರನ್ನು ಈ ಕಂಗಳಿಂದಲೇ ನೋಡಿದೆ. ನಿಜಕ್ಕೂ ಮುಂದಿನ ಪೀಳಿಗೆಯವರು ನಮಗೆ ದೊರಕಿದ ಈ ಸೌಭಾಗ್ಯವನ್ನು ಕಂಡು ಅಸೂಯೆಪಡುತ್ತಾರೆ.''

'ನಿರಾಲಾ'ರವರು ಹುಟ್ಟಿದ್ದು ೧೮೯೭ರಲ್ಲಿ ಕಲಕತ್ತೆಯ ಹತ್ತಿರದ ಮಹಿಷಾದಲದಲ್ಲಿ. ಸ್ಕೂಲಿನ ಶಿಕ್ಷಣ ಬಂಗಾಳಿ ಭಾಷೆಯ ಮಾಧ್ಯಮದಿಂದಲೇ. ಬಾಲಕರಾಗಿದ್ದಾಗಲೇ ತಾಯಿಯ ಪ್ರೀತಿಯಿಂದ ವಂಚಿತರಾದರು. ವಾಸ್ತವವಾಗಿ 'ನಿರಾಲಾ'ರವರು ಹುಟ್ಟಿದ್ದೇ ನೋವು ಮತ್ತು ಸಂಕಷ್ಟಗಳ ಮಡಿಲಿನಲ್ಲಿ. 'ನಿರಾಲಾ' ವಿದ್ಯಾರ್ಥಿಯಾಗಿದ್ದಾಗ ಮೇಧಾವಿಯಾದರೂ ಬಹಳ ಹಟಮಾರಿತನದವರಾಗಿದ್ದರು. ಓದಿಗಿಂತ ಆಟದ ಕಡೆಗೇ ಒಲವು. ಕುಸ್ತಿ ಆಡುವುದೆಂದರೆ ಬಹಳ ಇಷ್ಟ. ಆದರೆ ಅವರು ಒಂಬತ್ತನೇ ತರಗತಿಯನ್ನು ದಾಟಲೇ ಇಲ್ಲ.

ಆಟ-ಪಾಠದ ಗೆಳೆಸೇ ಹುಡುಗುತನದ ವಯಸ್ಸಿಗೇ ವಿವಾಹ. ಹೆಂಡತಿ ಅನನ್ಯ ಸುಂದರಿ ಮನೋಹರಾದೇವಿ. ಗಂಡ-ಹೆಂಡತಿಯರ ನಡುವೆ ಗಾಢಪ್ರೇಮ. ವಿಶಿಷ್ಟ ಸಂಗತಿಯೆಂದರೆ

'ನಿರಾಲಾ'ರವರಿಗೆ ಹಿಂದಿ ಕಲಿಸಿದವರೇ ಹೆಂಡತಿ ಮನೋಹರಾ ದೇವಿ. ಆದರೆ ತಾನೊಂದು ಬಗೆದರೆ ದೈವವೊಂದು ಬಗೆಯುತ್ತದೆ; ಅವರ ದಾಂಪತ್ಯ ಜೀವನ ಪ್ರೇಮಪೂರ್ಣವಾಗಿದ್ದರೂ ಹೆಚ್ಚುದಿನ ಮುಂದುವರೆಯಲಿಲ್ಲ. ವಿಧಿಯ ಆಟವೇ ಹಾಗೆ! ೧೯೧೮-೧೯ರಲ್ಲಿ ಬಂದ ಇನ್‌ಫ್ಲೂಯೆಂಜಾ ದಿಂದಾಗಿ ಹೆಂಡತಿ ಸಾವನ್ನಪ್ಪಿದರು. ಆಗ ಪುಟ್ಟ ಮಗ ಮತ್ತು ಮಗಳು 'ನಿರಾಲಾ'ರ ತೆಕ್ಕೆಯಲ್ಲಿ. ಈ ಆಘಾತದಿಂದಾಗಿ 'ನಿರಾಲಾ'ರ ಬದುಕು ಅವ್ಯವಸ್ಥಿತವಾಯಿತು. ಅದು ಬಡತನಕ್ಕೆ ಮತ್ತೊಂದು ಹೆಸರಾಯಿತು. 'ನಿರಾಲಾ'ರವರು ಹೆಂಡತಿಯ ಸ್ಮರಣೆಯಲ್ಲಿ 'ಗೀತಿಕಾ' (ಗೀತೆಗಳ ಸಂಗ್ರಹ) ರಚಿಸಿದರು. ಮುಂದೆ ಛಂದಸ್ಸಿನ ಬಂಧನವನ್ನೇ ತೊಡೆದುಹಾಕಿದ 'ನಿರಾಲಾ'ರ ಛಂದೋಬದ್ಧ ಸಂಗೀತಾತ್ಮಕ ಗೀತೆಗಳು ಮಧುರ, ದಿವ್ಯ ಶೃಂಗಾರದ ಮಧುರ ನೆನಪುಗಳು. ಪುಸ್ತಕದ ಸುದೀರ್ಘ 'ಭೂಮಿಕೆ'ಯಿಂದ ಹಿಂದಿ ಗೀತ ಪರಂಪರೆ ಮತ್ತು ಸಂಗೀತದ ಬಗ್ಗೆ ಅವರಿಗಿದ್ದ ಆಳವಾದ ಜ್ಞಾನದ ಪರಿಚಯವಾಗುತ್ತದೆ. 'ಗೀತಿಕಾ' ಬಗ್ಗೆ ಬರೆಯುತ್ತ ಜಯಶಂಕರ 'ಪ್ರಸಾದ'ರು 'ನಿರಾಲಾ'ರ ಗೀತೆಗಳಲ್ಲಿನ ಸ್ವರ-ಸಾಧನೆಯನ್ನು ಮತ್ತು ಅವುಗಳಲ್ಲಿನ ದಾರ್ಶನಿಕತೆ ಮತ್ತು ವ್ಯಂಜನಾ ಶಕ್ತಿಯನ್ನು ಮೆಚ್ಚಿಕೊಂಡಿದ್ದಾರೆ. 'ಗೀತಿಕಾ'ದ ಮೊದಲ ಗೀತೆ ಇಂದಿಗೂ ಹಿಂದಿ ಪ್ರೇಮಿಗಳ ಜನಮನದಲ್ಲಿ ಗುನುಗುತ್ತದೆ.

ವರದೇ, ವೀಣಾವಾದಿನಿ ವರದೇ!
ಪ್ರಿಯ ಸ್ವತಂತ್ರ-ರವ ಅಮೃತಮಂತ್ರನವ
ಭಾರತ ಮೇಂ ಭರದೇ!

*(ಹೇ ವೀಣಾವಾದಿನಿ, ವರದಾತ್ರಿ,*
*ಪ್ರಿಯವಾದ ಸ್ವಾತಂತ್ರ್ಯದ ಸ್ವರವನ್ನು*
*ಹೊಸ ಅಮೃತತ್ವ ಕೊಡುವ ಮಂತ್ರವನ್ನು*
*ಭಾರತದಲ್ಲಿ ಅನುರಣಿಸು!)*

ಪತ್ನಿಯನ್ನು ಕಳೆದುಕೊಂಡ 'ನಿರಾಲಾ'ರಿಗೆ ಒಂದು ಕಡೆ ತಾಯಿಲ್ಲದ ಮಕ್ಕಳನ್ನು ಸಾಕುವುದು,ಇನ್ನೊಂದು ಕಡೆ ಬದುಕಿಗಾಗಿ ಕೆಲಸಕ್ಕೆ ಹುಡುಕಾಟ. ಪಂಡಿತ್ ಮಹಾವೀರ ಪ್ರಸಾದ ದ್ವಿವೇದಿಗಳ ಕೃಪೆಯಿಂದ 'ಸಮನ್ವಯ' ನಂತರ 'ಮತವಾಲಾ' ಪತ್ರಿಕೆಯ ಸಂಪಾದಕತ್ವ ಲಭಿಸಿತು. ಆದರೆ ಸ್ವಾಭಿಮಾನಿ 'ನಿರಾಲಾ' ಈ ಪತ್ರಿಕೆಗಳಲ್ಲಿ ಮುಂದುವರಿಯಲಿಲ್ಲ.ನೌಕರಿಯಿಲ್ಲದೆ ಮಕ್ಕಳ ಪಾಲನೆಗಾಗಿ ವಿಜ್ಞಾಪನೆಗಳನ್ನು ಬರೆಯುವುದು, ಅನುವಾದ ಮಾಡುವುದು, ಔಷಧಿಗಳ ಪಾಮ್‌ಪ್ಲೆಟ್ ಬರೆಯುವುದು ಮುಂತಾದ ಕೆಲಸ ಮಾಡುತ್ತಿದ್ದರು. ಈ ಎಲ್ಲ ಕಷ್ಟಗಳ ಮಧ್ಯೆಯೂ 'ಪರಿಮಳ' ಕವಿತಾ ಸಂಕಲನವೇ ಅಲ್ಲದೆ ಕಾದಂಬರಿ, ಪ್ರಬಂಧಗಳನ್ನೂ ಬರೆದರು.

೧೯೩೫ಕ್ಕೆ 'ನಿರಾಲಾ'ರ ಜೀವನದಲ್ಲಿ ಮತ್ತೊಂದು ಆಘಾತ ಉಂಟಾಯಿತು. ಅವರ ಒಬ್ಬಳೇ ಮಗಳು ಸರೋಜಳ ಸಾವು. ಇದಕ್ಕೆ ಐದು ವರ್ಷದ ಹಿಂದೆ ಸರೋಜಳ ವಿವಾಹವಾಗಿತ್ತು. ಆದರೆ ಮಗಳು ಕಾಹಿಲೆ ಬಿದ್ದಾಗ 'ನಿರಾಲಾ'ರಿಗೆ ಸರಿಯಾಗಿ ಔಷಧಿ ಕೊಡಿಸಲಾಗಲಿಲ್ಲ. ಈ ಅಸಹಾಯಕತೆಯ ಕೊರಗು, ನೋವು ಅವರಿಗೆ ಕೊನೆಯವರೆಗೂ ಇತ್ತು. ಮಗಳ ಬಗ್ಗೆ ಶೋಕವೇ 'ಸರೋಜ ಸ್ಮೃತಿ' ಕವಿತೆಯಾಗಿ, ಕಥಾತ್ಮಕ ದೀರ್ಘಕವಿತೆಯಾಗಿ ಹಿಂದಿ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗಿ ಉಳಿಯಿತು.

ದುಖ ಹೀ ಜೀವನಕೀ ಕಥಾ ರಹೀ,

ಕ್ಯಾಕಹೂಂ ಆಜ್, ಜೊ ನಹೀ ಕಹೀ!

*(ದುಃಖವೇ ಜೀವನದ ಕಥೆಯಾಯಿತು*

*ಏನ ಹೇಳಲೀ ಇಂದು, ಹೇಳಲಾಗದುದ!)*

೧೯೩೮ರ ಹೊತ್ತಿಗೆ 'ನಿರಾಲಾ' ನಿರಂತರ ಸಂಘರ್ಷದಿಂದ ಬಳಲಿದ್ದರು. ಆದರೂ ಆತ್ಮ ವಿಶ್ವಾಸ ದೃಢವಾಗಿತ್ತು. ಇನ್ನು ಕವಿತೆಯನ್ನೇ ಬರೆಯಬಾರದೆಂದು ನಿರ್ಧರಿಸಿದರು. ಆದರೆ ಕವಯಿತ್ರಿ ಮಹಾದೇವಿ ವರ್ಮಾರವರ ಆಗ್ರಹಕ್ಕೆ ಮಣಿದು ನಿರ್ಧಾರ ಬದಲಿಸಿದರು. ಆದರೂ ಆಂತರಿಕ ಅಸ್ಥಿರತೆಯಿಂದಾಗಿ ಒಂದು ಜಾಗದಲ್ಲಿರುತ್ತಿರಲಿಲ್ಲ. ಯಾವಾಗಲೂ ಪ್ರವಾಸದಲ್ಲಿರುತ್ತಿದ್ದರು. 'ನಿರಾಲಾ' ಎಂದೂ ಸಾಹಿತ್ಯದಲ್ಲಿ ರಾಜನೀತಿಯ ಒಳಪ್ರವೇಶವನ್ನು ಒಪ್ಪುತ್ತಿರಲಿಲ್ಲ. ಅವರು ೧೯೪೧-೪೨ರಲ್ಲಿ ಉನ್ನಾವದಲ್ಲಿ ವಾಸಿಸುತ್ತಿದ್ದರು. ಅಲ್ಲಿಂದ ಕೆಲವು ಕಾಲ ಪ್ರಯಾಗದಲ್ಲಿದ್ದರು. ಈಗಾಗಲೇ ಮಾನಸಿಕ ಸಮತೋಲನ ಕಳೆದುಕೊಳ್ಳತೊಡಗಿದ್ದರು. ವಿಕ್ಷಿಪ್ತತೆಯ ಲಕ್ಷಣಗಳು ಕಾಣಿಸಿಕೊಳ್ಳತೊಡಗಿದ್ದವು. 'ನಿರಾಲಾ'ರಿಗೆ ಜೀವನ ನಡೆಸಲು ಯಾವ ಆದಾಯದ ಮೂಲವೂ ಇರಲಿಲ್ಲ. ಅವರು ಹಿಂದಿನ ಪುಸ್ತಕಗಳ ಕಾಪಿರೈಟ್‌ಗಳನ್ನು ಮಾರಿಬಿಟ್ಟಿದ್ದರು. ಬರಿಗಾಲಲ್ಲಿ, ಹರಿದ ಕುರ್ತಾ, ಮಲಿನ ಧೋತಿಯಲ್ಲಿ ಪ್ರಯಾಗದ ಬೀದಿಗಳಲ್ಲಿ ಅಲೆಯುವುದನ್ನು ಕಾಣಬಹುದಾಗಿತ್ತು. ಕವಿತೆಗಳ ಹೊತ್ತಿಗೆ ಕಂಕುಳಲ್ಲಿರಿಸಿಕೊಂಡು ಪ್ರಯಾಗದ ದಾರಗಂಜ್‌ನಿಂದ ಇಂಡಿಯನ್ ಪ್ರೆಸ್‌ವರೆಗೆ ಕಾಲ್ನಡಿಗೆಯಲ್ಲೇ ಹೋಗಿಬರುತ್ತಿದ್ದರು.

೧೯೪೭ಕ್ಕೆ 'ನಿರಾಲಾ'ರಿಗೆ ೫೦ ವರ್ಷಗಳು ತುಂಬಿದ್ದರಿಂದ ಬನಾರಸ್, ಕಲಕತ್ತ ಮತ್ತು ಮುಂಬಯಿಯಲ್ಲಿ ಸ್ವರ್ಣಜಯಂತಿ ಆಚರಿಸಲಾಯಿತು. 'ನಯಾ ಸಾಹಿತ್ಯ' ಪತ್ರಿಕೆ 'ನಿರಾಲಾ ಅಂಕ' ಪ್ರಕಟಿಸಿತು. ಆದರೆ ಇದರಿಂದ 'ನಿರಾಲಾ'ರಿಗೇನು ಸಂತೋಷವಾಗಲಿಲ್ಲ. ಅವರು ನಿಷ್ಕ್ರಿಯರಾಗಿರುತ್ತಿದ್ದರು. ಈಗ ಬರೆಯುವುದು ಕಡಿಮೆಯಾಗಿ 'ಸ್ವಗತ ಭಾಷಣ'ಗಳೇ ಹೆಚ್ಚಾಗಿದ್ದವು. ವಿಕ್ಷಿಪ್ತರಾಗಿ ಒಮ್ಮೆ ಕವಿ ರವೀಂದ್ರರೊಡನೆ ಮಾತನಾಡಿದರೆ, ಮತ್ತೊಮ್ಮೆ ಅರವಿಂದರೊಡನೆ ಅಥವಾ ವಿವೇಕಾನಂದರೊಡನೆ ಅಥವಾ ಗಾಂಧಿ ಇಲ್ಲವೇ ನೆಹರೂರೊಡನೆ ಮಾತನಾಡಿಕೊಳ್ಳುತ್ತಿದ್ದರು. ಒಮ್ಮೆ ಹಿಂದಿಯಲ್ಲಿ ಮಾತನಾಡತೊಡಗಿದರೆ ಮತ್ತೊಮ್ಮೆ ಕೇವಲ ಇಂಗ್ಲೀಷಿನಲ್ಲಿಯೇ ಮಾತನಾಡುತ್ತಿದ್ದರು.

'ನಿರಾಲಾ' ಎಷ್ಟು ಸ್ವಾಭಿಮಾನಿಯೆಂದರೆ ಯಾರಿಂದಲೂ ಸಹಾಯ ಪಡೆಯುತ್ತಿರಲಿಲ್ಲ. ಮಹಾದೇವಿಯವರು ಉತ್ತರ ಪ್ರದೇಶದಿಂದ ೨೦೦ರೂ.ಗಳ ಮಾಸಾಶನವನ್ನು ಕೊಡಿಸಿದರೂ ನಿರಾಲಾರನ್ನು ಒಪ್ಪಿಸುವುದು ಕಷ್ಟವೇ ಆಯಿತು. 'ಅಪರಾ' ಕಾವ್ಯಕೃತಿಗೆ ೨೧,೦೦೦ ರೂ. ಪುರಸ್ಕಾರ ಬಂದಾಗಲೂ ಅಷ್ಟೆ.

ಆದರೆ 'ನಿರಾಲಾ' ಅಷ್ಟೇ ಕರುಣಾಳು. ಯಾರಾದರೂ ದೀನರು, ದರಿದ್ರರು ಕಂಡರೆ ಏನಿದ್ದರದನ್ನೇ ಕೊಟ್ಟುಬಿಡುತ್ತಿದ್ದರು. ಇಂತಹ ಹಲವಾರು ಪ್ರಸಂಗಗಳಲ್ಲಿ ಒಂದು ನಿದರ್ಶನ ಬಹಳ ರೋಚಕ. ಚಳಿಗಾಲ, ಒಬ್ಬ ಪ್ರಕಾಶಕ ರಾಯಲ್ಟಿ ಹಣ 'ನಿರಾಲಾ'ರಿಗೆ ಕೊಟ್ಟರೆ ಅವರ ಕೈಯಲ್ಲಿ

ನಿಲ್ಲುವುದಿಲ್ಲ ಎಂದು ಯೋಚಿಸಿ ಒಂದು ದಪ್ಪ ರಜಾಯಿ ಮತ್ತು ಗದ್ದಿ ಮಾಡಿಸಿಕೊಂಡು 'ನಿರಾಲಾ'ರ ಮನೆಗೆ ಬಂದ. 'ನಿರಾಲಾ' ಹೇಳಿದರು - ಇದೆಲ್ಲಾ ಏಕೆ? ನನ್ನ ಹತ್ತಿರ ಕಂಬಳಿಯಿದೆ. ನನಗೆ ರಾಯಲ್ಟಿಯ ಹಣವನ್ನೇ ಕೊಡು ಎಂದರು. ಪ್ರಕಾಶಕ 'ನಿರಾಲಾ'ರ ಬಗ್ಗೆ ಬಹು ಆದರಾಭಿಮಾನ ಹೊಂದಿದ್ದ. ಅದಕ್ಕೆಂದ- 'ಆಯಿತು. ಹಣವನ್ನೇ ಕೊಡುತ್ತೇನೆ. ಆದರೆ ಈ ರಜಾಯಿ, ಗದ್ದಿ ಇಲ್ಲೇ ಇರಲಿ.' ಒಂದೆರಡು ದಿನ ಕಳೆದವು. ಒಂದು ದಿನ ಒಬ್ಬ ಮುದುಕಿ ನಡುಗುತ್ತಾ ಬಂದಳು. ಅವಳನ್ನು ನೋಡಿ, 'ನಿರಾಲಾ'ರಿಗೆ ಕರುಣೆ ಉಕ್ಕಿ ರಜಾಯಿ, ಗದ್ದಿ ತೋರಿಸಿ 'ತೆಗೆದುಕೊಂಡು ಹೋಗು. ಬೆಚ್ಚಗಿರುತ್ತದೆ' ಎಂದರು. ಮುದುಕಿಗೆ ಮೊದಲು ನಂಬಿಕೆಯೇ ಬರಲಿಲ್ಲ. ಇಂತಹ ದಾನಿಗಳೂ ಇದ್ದಾರಾ? ರಜಾಯಿಯನ್ನು ಮುದುಕಿ ಹೊರಬೇಕಾಯಿತು. 'ನಿರಾಲಾ'ರು ಗದ್ದಿಯನ್ನು ಹೊರತಂದು, 'ಇದನ್ನೂ ತೆಗೆದುಕೊಂಡು ಹೋಗು' ಎಂದರು. ಮುದುಕಿ ಎಂದಳು- 'ಇಲ್ಲ. ನನ್ನಿಂದಾಗದು, ರಜಾಯಿ ಹೊರುವುದೇ ಕಷ್ಟವಾಗಿದೆ. ಇನ್ನು ಗದ್ದಿ ಹೇಗೆ ಹೊರಲಿ?' ಆಗ 'ನಿರಾಲಾ' ತಾವೇ ಸ್ವತಃ ಗದ್ದಿ ಹೊತ್ತುಕೊಂಡು ಮುದುಕಿ ಹಿಂದೆ ನಡೆದರು. ಅವಳ ಮನೆಗೆ ಗದ್ದಿ ತಲುಪಿಸಿ ಪ್ರಸನ್ನರಾದರು. ಮುದುಕಿಯೇ ಕಕ್ಕಾಬಿಕ್ಕಿ!

'ನಿರಾಲಾ'ರ ಕೊನೇ ದಿನಗಳು ಹೃದಯ ವಿದ್ರಾವಕ. ಒಂದು ಕಡೆ ವಿಕ್ಷಿಪ್ತತೆ; ಮತ್ತೊಂದೆಡೆ ಕಿತ್ತು ತಿನ್ನುವ ಬಡತನ. ಪ್ರಯಾಗದ ದಾರಗಂಜ್‌ನಲ್ಲಿ ರೊಟ್ಟಿ ಹಿಡಿದುಕೊಂಡು 'ದಾಲ್'ಗಾಗಿ ಅಲೆಯವುದನ್ನು ನೋಡಬಹುದಾಗಿತ್ತು. ಕೊನೆಗೆ ಬಹಳ ಕಾಹಿಲೆ ಬಿದ್ದರು. ಮಹಾದೇವಿ ಸರ್ಕಾರದಿಂದ ಸಹಾಯ ಕೊಡಿಸುವ ಪ್ರಯತ್ನ ಮಾಡಿದರು. ಆದರೆ ಈ ಸ್ವಾಭಿಮಾನಿ 'ನಿರಾಲಾ' ಕೊನೆಯ ಉಸಿರಿನವರೆಗೂ ಸರ್ಕಾರದ ಚಿಕಿತ್ಸೆಯನ್ನು ನಿರಾಕರಿಸಿದರು. ೧೫ನೇ ಅಕ್ಟೋಬರ್ ೧೯೬೧ರಂದು ಕೊನೆ ಉಸಿರೆಳೆದರು. ಹಿಮಾಲಯದಂತಹ ಮಹಾಚೇತನ ಲೀನವಾಯಿತು. ಈ ಸಂದರ್ಭದಲ್ಲಿ ಮಹಾದೇವಿ ವರ್ಮಾರವರ ಉದ್ಗಾರ ಉಲ್ಲೇಖನೀಯ- ''ನಿರಾಲಾ'ರಂತಹ ಯುಗಾಂತರಕಾರಿ ಕವಿ ಅನಾಯಾಸವಾಗಿಯೇ ಬರುತ್ತಾರೆ ಮತ್ತು ತಮ್ಮ ಕೊಡುಗೆಯ ಬಗ್ಗೆ ತಾವೇ ನಿರ್ಲಕ್ಷ್ಯರಾಗಿ ಹೋಗಿಬಿಡುತ್ತಾರೆ. ಹೇಗೆ ಅವರ ಬರುವುದರ ಮೇಲೆ ನಮಗೆ ನಿಯಂತ್ರಣವಿಲ್ಲವೋ, ಹಾಗೆಯೇ ಅವರನ್ನು ಅಗಲುವುದು ನಮ್ಮ ವಶದಲ್ಲಿಲ್ಲ. ಕೇವಲ ಅವರ ಕೊಡುಗೆಯ ಬಗ್ಗೆ ಕೃತಾರ್ಥತೆ ಸಲ್ಲಿಸುವುದೊಂದು ನಮ್ಮ ವಶದಲ್ಲಿರುವುದು.''

'ನಿರಾಲಾ'ರ ಬದುಕಿನಷ್ಟೇ ಬರಹವೂ ವಿಲಕ್ಷಣ ಮತ್ತು ಬಹು ಆಯಾಮದಿಂದ ಕೂಡಿದ್ದು. ಅವರ ಕವಿತೆ, ಕತೆ, ಕಾದಂಬರಿ, ಪ್ರಬಂಧ, ಸಮೀಕ್ಷೆ ಎಲ್ಲದರಲ್ಲಿಯೂ ವಿಲಕ್ಷಣ ಪ್ರತಿಭೆ ಇಣುಕುತ್ತದೆ. ಆದರೆ ಹೆಚ್ಚು ಜನಪ್ರಿಯ ಅವರ ಕವಿತೆಗಳೇ. ಅದರ ಕಾವ್ಯಯಾತ್ರೆ ಪ್ರಾರಂಭವಾದುದು ೧೯೧೬ರಿಂದ. ಅವರ ಮೊದಲ ಕವಿತೆಯೇ - 'ಜುಹೀ ಕೀ ಕಲಿ' (ಜಾಜಿ ಮೊಗ್ಗು) ವಿಶಿಷ್ಟ.

'ವಿಜನ-ವನ-ವಲ್ಲರಿ ಪರ್
ಸೋತೀ ಥಿ ಸುಹಾಗ ಭರೀ-
ಸ್ನೇಹ-ಸ್ವಪ್ನ-ಮಗ್ನ-ಅಮಲ-ಕೋಮಲ-ತನು ತರುಣೀ
ಜುಹೀ ಕೀ ಕಲಿ;
ದೃಗ ಬಂದ್ ಕಿಯೇ, ಶಿಥಿಲ ಪತ್ರಾಂಕ ಮೇಂ!

(ವಿಜನ-ವನ-ವಲ್ಲರಿಯ ಮೇಲೆ
ನಿದ್ರಿಸುತ್ತಿದ್ದಾಳೆ ಸುಹಾಗಿನಿ-
ಸ್ನೇಹ-ಸ್ವಪ್ನ-ಮಗ್ನ-ಅಮಲ-ಕೋಮಲ-ತನು ತರುಣಿ
ಜಾಜಿಯ ಮೊಗ್ಗು
ಕಣ್ಮುಚ್ಚಿ, ಹಸಿದ ಪತ್ರಾಂಕದಲ್ಲಿ)

ಹೀಗೆ 'ಜುಹೀ ಕೀ ಕಲಿ' (ಜಾಜಿ ಮೊಗ್ಗು)'ಯಲ್ಲಿ ಪ್ರಕೃತಿಯ ಮೂಲಕ ಶೃಂಗಾರದ ಸಹಜ ಸುಂದರ ಚಿತ್ರಣದಲ್ಲಿ ಕಲಾಪ್ರೌಢಿಮೆಯನ್ನು ಮೆರೆದಿದ್ದಾರೆ. ಅವರ ಮೊದಲ ಸಂಕಲನ ಪ್ರಕಟಗೊಂಡದ್ದು ೧೯೨೩ರಲ್ಲಿ ಮತ್ತು ಕೊನೆ ಸಂಕಲನ 'ಗೀತಗುಂಜ್' ೧೯೫೪ರಲ್ಲಿ. ಅವರ ೧೩ ಕಾವ್ಯಗಳಲ್ಲದೆ ೪ ಕಾದಂಬರಿಗಳು, ೪ ಕಥಾ ಸಂಕಲನ, ೪ ಜೀವನ ಚರಿತ್ರೆಗಳು, ೪ ಪ್ರಬಂಧಗಳು ಮತ್ತು ೨ ರೇಖಾಚಿತ್ರಗಳು ಹಿಂದಿ ಸಾಹಿತ್ಯವನ್ನು ಸಮೃದ್ಧಗೊಳಿಸಿವೆ.

'ನಿರಾಲಾ'ರ ವ್ಯಕ್ತಿತ್ವವೇ ಹಿಮಾಲಯಸದೃಶವಾದುದು. ಅವರ ಕರುಣೆಯೊ ಗಂಗೆಯಂತೆ. ಅವರ ಕರುಣೆ 'ತೋಡತೀ ಪತ್ಥರ್' (ಕಲ್ಲು ಕುಟ್ಟುವವಳು) ಮತ್ತು 'ವಿಧವಾ' ಕವಿತೆಗಳಲ್ಲಿ ಉಕ್ಕಿ ಹರಿದಿದೆ.

ಕಲ್ಲು ಕುಟ್ಟುವವಳು- ಅಲಹಾಬಾದಿನ ಹಾದಿಬದಿಯಲ್ಲಿ 'ನಿರಾಲಾ'ರಿಗೆ ಕಂಡ ಬಗೆ-

ನಹೀಂ ಛಾಯಾದಾರ್
ಪೇಡ್ ವಹ್ ಜಸಕೇ ತಲೆ ಬೈಠಿ ಸ್ವೀಕಾರ್;
ಶ್ಯಾಮ್ ತನ್, ಭರ್ ಬಂಧಾ ಯೌವನ್
ನತ ನಯನ್, ಪ್ರಿಯ-ಕರ್ಮ್,-ರತಮನ,
ಗುರು ಹಥೌಡಾ ಹಾಥ್,
ಕರತೀ ಬಾರ್-ಬಾರ್ ಪ್ರಹಾರ್;-

(ಇರಲಿಲ್ಲ ನೆರಳ ನೀಡುವ
ಮರ, ಅವಳು ಕುಳಿತುಕೊಂಡಲ್ಲಿ;
ಶ್ಯಾಮವರ್ಣೆ, ತುಂಬು ಯೌವನ
ನತನಯನ, ಪ್ರಿಯ-ಕರ್ಮ-ರತ ಮನಸು
ಕೈಯಾಳು ದೊಡ್ಡಸುತ್ತಿಗೆ
ಹೊಡೆಯುತ್ತಿದ್ದಾಳೆ ಮತ್ತೆ ಮತ್ತೆ.)

ಭಾರತದ 'ವಿಧವೆ' ಕ್ರೂರ ಕಾಲ-ತಾಂಡವದ ಸ್ಮೃತಿರೇಖೆಯಂತೆ 'ನಿರಾಲಾ'ರಿಗೆ ಕಂಡುಬರುತ್ತಾಳೆ-

''ವಹ್ ಇಷ್ಟದೇವ ಕೇ ಮಂದಿರ್ ಕೀ ಪೂಜಾ-ಸೀ
ವಹ್ ದೀಪ ಶಿಖಾ-ಸೀ ಶಾಂತ್, ಭಾವಮೇಂ ಲೀನ್

ವಹ್ ಕ್ರೂರ ಕಾಲ-ತಾಂಡವ ಕೀ ಸ್ಮೃತಿರೇಖಾಸೀ
ವಹ್ ಟೂಟೆ ತರು ಕೀ ಛಿನ್ನ ಲತಾಸೀ ದೀನ್
ದಲಿತ ಭಾರತ ಕೀ ವಿಧವಾ ಹೈ.''

*(ಅವಳು ಇಷ್ಟದೇವನ ಮಂದಿರದ ಪೂಜೆಯಂತೆ,
ಅವಳು ದೀಪ-ಶಿಖೆಯಂತೆ ಶಾಂತ, ಭಾವದಲಿ ಲೀನ
ಅವಳು ಕ್ರೂರ-ಕಾಲ-ತಾಂಡವದ ಸ್ಮೃತಿರೇಖೆಯಂತೆ
ಅವಳು ಮುರಿದ ಮರದಿ ಬೇರ್ಪಟ್ಟ ಲತೆಯಂತೆ ದೀನಳು
ದಲಿತ ಭಾರತದ ವಿಧವೆ).*

'ನಿರಾಲಾ'ರ 'ರಾಮ್‌ಕೀ ಶಕ್ತಿಪೂಜಾ' ಒಂದು ಪ್ರತೀಕಾತ್ಮಕವಾದ ದೀರ್ಘ ಕವಿತೆ. 'ನಿರಾಲಾ' ತಮ್ಮ ಜೀವನದ ವಿಷಮತೆ, ಅವರೋಧಗಳನ್ನು ರಾಮನ ಮೂಲಕ ತೋರಿಸಿದ್ದಾರೆ. ಬಂಗಾಳದ ಕೃತ್ತಿವಾಸ ರಾಮಾಯಣದಿಂದ ಪ್ರಭಾವಿತವಾಗಿ ಮೂಡಿಬಂದ ಈ ಕೃತಿ- ರಾವಣನ ಅಪರಾಜೇಯ ಶಕ್ತಿಯಿಂದ ಅಧೀರನಾಗಿ ರಾಮ ವಿಜಯ ಪಡೆಯುವುದು ಸಂಭವವಲ್ಲವೇನೋ ಎಂದು ಧೃತಿಗೆಡುವುದು, ನಂತರ ಜಾಂಬವಂತನಿಂದ ಸಲಹೆ ಪಡೆದು ಶಕ್ತಿಪೂಜೆಗೆ ಸಿದ್ಧವಾಗುವುದು, ಇತ್ತ ಹನುಮಂತನ ವಿರಾಟಶಕ್ತಿ, ಶಕ್ತಿಯನ್ನೂ ವಿರೋಧಿಸಲು ಹೋಗುವುದು, ಕೊನೆಗೆ ಏಕಾದಶ ರುದ್ರನಾದ ಹನುಮಂತನು ನೂರ ಎಂಟು ಕಮಲಗಳನ್ನು ತರುವುದು, ಪೂಜೆಯ ಸಮಯಲ್ಲಿ ರಾಮನ ಸ್ಥೈರ್ಯವನ್ನು ಶಕ್ತಿಯು ಪರೀಕ್ಷಿಸುವುದು - ಹೀಗೆ ರಾಮನ ಅಂತರದ್ವಂದ್ವ, ಅಧೀರತೆ, ಜೊತೆಗೆ ಇವೆಲ್ಲವನ್ನೂ ಮೆಟ್ಟಿನಿಲ್ಲುವ ಅವನ ಮನೋಬಲ-ಇವನ್ನೇ ಕಾವ್ಯವಸ್ತುವಾಗಿಸಿಕೊಂಡ 'ನಿರಾಲಾ' ಕಾವ್ಯಪ್ರತಿಭೆಗೆ ಉದಾಹರಣೆಯಾಗಿದೆ.

ಶಕ್ತಿಪೂಜೆ ಮಾಡುತ್ತ ೧೦೮ನೇ ಕಮಲವನ್ನು ತೆಗೆದುಕೊಳ್ಳಲು ಕೈಮುಂದೆ ಮಾಡಿದಾಗ ಹೂ ಕಾಣದೆ ಇದ್ದಕ್ಕಿದ್ದಂತೆ ಸ್ಥಿರತೆ ಸ್ಥೈರ್ಯ ಕಳೆದುಕೊಂಡು ಮನಸ್ಸು ಚಂಚಲವಾಗಿ ಕಂಗಳು ತುಂಬಿ ಬಂದು ರಾಮ ಹೇಳುವ ಮಾತು 'ನಿರಾಲ'ರ ಮನಃಸ್ಥಿತಿಯನ್ನೂ ಬಿಂಬಿಸುತ್ತದೆ-

''ಧಿಕ್ ಜೀವನ್ ಜೋ ಪಾತಾ ಹೀ ಆಯಾ ಹೈ ವಿರೋಧ
ಧಿಕ್ ಸಾಧನ್ ಜಿಸ ಕೇ ಲಿಯೇ ಸದಾ ಹೀ ಕಿಯಾ ಶೋಧ !
ಜಾನಕೀ ! ಹಾಯ್ ಉದ್ಧಾರ ಪ್ರಿಯಾ ಕಾ ನ ಹೋ ಸಕಾ?''

*(ವಿರೋಧವನ್ನ ಕಾಣುತ್ತ ಬಂದ ಈ ಜೀವನಕ್ಕೆ ಧಿಕ್ಕಾರ
ಯಾವ ಸಾಧನೆಗಾಗಿ ಸದಾ ಶೋಧನಿರತನಾಗಿದ್ದನೋ ಅದಕೆ ಧಿಕ್ಕಾರ
ಜಾನಕೀ! ಅಯ್ಯೋ ಪ್ರಿಯಳೇ, ನಿನ್ನ ಉದ್ಧಾರ ಮಾಡಲಾಗಲಿಲ್ಲವಲ್ಲಾ !)*

'ನಿರಾಲಾ'ರವರ 'ತುಲಸೀದಾಸ' ತುಲಸೀದಾಸರ ಮೂಲಕ ಸಾಂಸ್ಕೃತಿಕ ಜಾಗೃತಿಯ ಅಭಿವ್ಯಕ್ತಿಯ ಕಾವ್ಯ. 'ನಿರಾಲಾ'ರವರು ತುಲಸೀದಾಸರಂತೆಯೇ ದಾರ್ಶನಿಕ ಮನೋಭಾವದ, ದೇಶದ ಸಾಂಸ್ಕೃತಿಕ ಏಳಿಗೆ ಬಗ್ಗೆ ಸದಾ ತುಡಿಯುವ ಸ್ವಾಭಿಮಾನಿ ಸಹೃದಯೀ ಕವಿ.

ತುಲಸೀದಾಸರ ಪತ್ನಿ ತುಲಸೀದಾಸರನ್ನು ರಾಮಾಭಿಮುಖರನ್ನಾಗಿ ಮಾಡಿದಂತೆ, 'ನಿರಾಲಾ'ರ ಪತ್ನಿ 'ನಿರಾಲಾ'ರನ್ನು ಹಿಂದಿ ಮೂಲಕ ದೇಶದ ಸಾಂಸ್ಕೃತಿಕ ಉನ್ನತಿಗಾಗಿ ಸಮರ್ಪಿಸಿಕೊಳ್ಳುವಂತೆ ಮಾಡಿದರು. 'ತುಲಸೀದಾಸ' ಕಾವ್ಯದಲ್ಲಿ ತುಲಸೀದಾಸರ ಮೂಲಕ ಭಾರತದ ಹಿರಿಮೆಯನ್ನು ಎತ್ತಿಹಿಡಿಯುವುದರ ಜೊತೆಗೆ ವರ್ತಮಾನ ದುಸ್ಥಿತಿಯನ್ನೂ ಚಿತ್ರಿಸಿದ್ದಾರೆ.

'ನಿರಾಲಾ'ರವರು ತಮ್ಮ ಕೃತಿಗಳಲ್ಲಿ ಪ್ರಕೃತಿಯ ಯಥಾರ್ಥ-ಸೌಂದರ್ಯದ ಮೂಲಕ ಮಾನವೀಯ ಪರಿಸ್ಥಿತಿಯನ್ನು ಚಿತ್ರಿಸಿದಂತೆ ನಾರಿ ಸೌಂದರ್ಯ ಚಿತ್ರಿಸುವಾಗಲೂ ಒಂದು ಸಹಜವಾದ ಮತ್ತು ಆರೋಗ್ಯಕರವಾದ ಮನೋಭಾವವನ್ನು ಇಟ್ಟುಕೊಂಡಿದ್ದಾರೆ. ಸಾಮಾಜಿಕ ಅನ್ಯಾಯದ ವಿರುದ್ಧ ಸೆಟೆದು ನಿಲ್ಲುವ ಪ್ರವೃತ್ತಿಯನ್ನು 'ನಿರಾಲಾ'ರ ಜೀವನದುದ್ದಕ್ಕೂ ನೋಡುತ್ತೇವೆ. ಮತ್ತು ಆ ಪ್ರವೃತ್ತಿ ಅವರ ವ್ಯಂಗ್ಯ ಕವಿತೆಗಳಲ್ಲಿ ತೀವ್ರವಾಗಿ ಅಭಿವ್ಯಕ್ತಿ ಪಡೆದಿದೆ.

ದಾರಿದ್ರ್ಯದ ನಗ್ನಚಿತ್ರ ಎಂತಹವರ ಮನಸ್ಸನ್ನೂ ಕಲಕುತ್ತದೆ.-

'ಚಾಟ್ ರಹೇ ವೇ ಜೂಠೀ ಪತ್ತಲ ಕಭೀ ಸಡಕ್ ಪರ್ ಹುಯೇ
ಔರ್ ಝಪಟ್ ಲೇನೇಕೋ ಉನಸೆ ಕುತ್ತೇ ಭೀ ಹೈ ಅಡೆ ಹುಯೇ !'

*('ನೆಕ್ಕುತ್ತಿದ್ದಾರೆ ಎಂಜಲೆಲೆಯ ಒಮ್ಮೆ ದಾರಿಯಲಿ ನಿಂತು*
*ಕಿತ್ತುಕೊಳ್ಳಲು ಎಂಜಲೆಲೆಯ ನಾಯಿಗಳೂ ಸಿದ್ಧ ಖಿವೆ.')*

ನಾಯಿಗಳಿಗೂ ಬಿಡದೆ ಎಂಜಲೆಲೆಯ ನೆಕ್ಕುವ ದಾರಿದ್ರ್ಯ! ಸಮಾಜದಲ್ಲಿನ ಯಥಾರ್ಥವನ್ನು, ಹರಿತವಾದ ಹಾಸ್ಯ ವ್ಯಂಗ್ಯದಲ್ಲಿ ಅಭಿವ್ಯಕ್ತಿಸುವ ಕವಿತೆಗಳಲ್ಲಿ 'ಗರಂಪಕೌಡಿ' ಉದಾಹರಿಸಬಹುದಾಗಿದೆ.

'ತೇಲ್ ಕೀ ಭುನೀ
ನಮಕ್, ಮಿರ್ಚಕೀ ಮಿಲೀ
ಏ ಗರಂ ಪಕೌಡಿ !
ಮೇರೀ ಜೇಬ್ ಜಲ್‌ಗಯೀ
ಸಿಸಕಿಯಾಂ ನಿಕಲ್ ರಹೀಂ
ಲಾರ್‌ಕೀ ಬೂಂದ್ ಕಿತನೀ ಟಪಕೀ
ಫಿರ್ ದಾಥ-ತಲೆ ತುಝು ದಬಾ ರಖಾ ಮೈನೇ
ಕಂಜೂಸ್‌ನೇ ಜ್ಯೋ ಕೌಡಿ ॥

*(ಎಣ್ಣೆಯಲ್ಲಿ ಕರಿದು*
*ಉಪ್ಪು ಕಾರ ಹಾಕಿದ*
*ಏ ಗರಂ ಪಕೋಡ!*
*ನನ್ನ ನಾಲಿಗೆ ಸುಟ್ಟುಹೋಯಿತು*
*ತಾಪಕ್ಕೆ ಕಣ್ಣೀರು ಬರುತಿದೆ*

*ಜೊಲ್ಲು ಸುರಿಯುತ್ತಿದೆ*
*ಆದರೂ ದವಡೆಯ ಕೆಳಗೆ ಅದುಮಿಟ್ಟುಕೊಂಡೆ*
*ಪಕೌಡಿಯ*
*ಜಿಪುಣ ಕಾಸ ಬಚ್ಚಿಟ್ಟುಕೊಳ್ಳುವಂತೆ!)*

ಬಿಸಿ ಪಕೋಡವನ್ನು ತಿನ್ನಲೂ ಆಗದ, ಉಗಿಯಲೂ ಮನಸಾಗದ ಒಬ್ಬ ದಟ್ಟದರಿದ್ರನ ಯಥಾರ್ಥ ಚಿತ್ರ 'ನಿರಾಲಾ' ರಿಂದಲೇ ಸಾಧ್ಯ!

'ಕುಕುರಮುತ್ತಾ' (ನಾಯಿ ಕೊಡೆ) ಒಂದು ಪ್ರತೀಕಾತ್ಮಕ ಮತ್ತು ಪ್ರಗತಿವಾದೀ ಕಾವ್ಯ. 'ಕುಕುರ ಮುತ್ತಾ' ನಿಮ್ನವರ್ಗದ ಪ್ರತೀಕವಾದರೆ, ಗುಲಾಬಿ ಉಚ್ಚವರ್ಗದ ಪ್ರತೀಕ. ಗುಲಾಬಿ ಕೇವಲ ಸುಂದರ ಆದರೆ 'ಕುಕುರಮುತ್ತಾ' ಉಪಯೋಗಿ. ಅದರಿಂದ ಸ್ವಾದಿಷ್ಟವಾದ ಕಬಾಬ್ ಮಾಡಬಹುದು. ಆದ್ದರಿಂದ 'ಕುಕುರಮುತ್ತಾ' ತನ್ನನ್ನು ಸಹಜ, ಮೌಲಿಕ ಮತ್ತು ಗುಲಾಬಿಯನ್ನು ನಕಲಿ ಎನ್ನುತ್ತದೆ.

'ಕುಕುರಮುತ್ತಾ (ನಾಯಿಕೊಡೆ) ಹೇಳುತ್ತದೆ ಗುಲಾಬಿಗೆ-
ದೇಖ್ ಮುಝುಕೋ, ಮೈಂ ಬಡಾ, ಡೇಡ ಬಾಲಿಶ್ತ್ ಔರ್ ಊಂಚೆ ಹೂಂ ಚಢಾ,
ಔರ್ ಅಪನೇಸೇ ಉಗಾ ಮೈಂ, ಬಿನಾ ದಾನೇ ಕಾ, ಚುಗಾ ಮೈಂ,
ಕಲಮ್ ಮೇರಾ ನಹೀಂ ಲಗತಾ, ಮೇರಾ ಜೀವನ್ ಆಪ್ ಜಗತಾ
ತೂ ಹೈ ನಕಲೀ, ಮೈಂ ಹೂಂ ಮೌಲಿಕ್, ತೂ ಹೈ ಬೇಕಾರ್, ಮೇಂ ಹೂಂ ಲೌಕಿಕ್
ತೂ ಹೈ ರಂಗಾ ಔರ್ ಮೈಂ ಧುಲ್, ಪಾನಿ ಮೇ, ತೂ ಬುಲ್ ಬುಲಾ।
ತೂನೇ ದುನಿಯಾಕೊ ಬಿಗಾಡಾ, ಮೈನೇ ಗಿರನೇಸೆ ಉಭಾಢಾ,
ತೂನೇ ಜನಖಾಬನಾ, ರೋಟಿಯೋ ಛೀನೀ,
ಮೈನೇ ಉನಕೋ ಏಕ್ ಕೀ ದೋ- ತೀನ್ ದೀಂ.

*(ನೋಡೆನ್ನ ನಾ ದೊಡ್ಡವ, ಒಂದೂವರ ಗೇಣು ಇನ್ನೂ ಏರಿದ್ದೇನೆ.*
*ನಾ ಸ್ವತಃ ಹುಟ್ಟಿದವ, ಬೀಜ ಹೆಕ್ಕದೇ ಹುಟ್ಟಿದವ*
*ಕಸಿಮಾಡಲು ಕೊಯ್ದ ಗಿಡ ನಾನು, ನನ್ನ ಜಗತ್ತು ಸ್ವತಃ ನಿರ್ಮಿತ,*
*ನೀನೋ ನಕಲಿ, ನಾ ಮೌಲಿಕ, ನೀ ನಿರುಪಯೋಗಿ, ನಾ ಲೌಕಿಕ*
*ನೀ ಬಣ್ಣ ಬಣ್ಣ, ನಾ ಸ್ವಚ್ಛ, ನೀರಲ್ಲಿ ನಾ, ನೀ ನೀರ್ಗುಳ್ಳೆ*
*ನೀ ಜಗವ ಕೆಡಿಸಿದೆ, ನಾ ಬೀಳುವವರನೆತ್ತಿದೆ*
*ಹೆಣ್ಣಗ ನೀ, ರೊಟ್ಟಿಯ ಕಿತ್ತುಕೊಂಡೆ*
*ನಾ ಅವರಿಗೆ ಒಂದಕ್ಕೆ ಎರಡು ಮೂರು ಕೊಟ್ಟೆ).*

ಇಷ್ಟು ತೀವ್ರವಾದ ವ್ಯಂಗ್ಯ ಹಿಂದಿಯಲ್ಲಿ ಅನ್ಯತ್ರ ಸಿಗದು. ಹೀಗೆ ನಾಯಿಕೊಡೆ ಗುಲಾಬಿಗಿಂತ ತಾನು ಸ್ವಂತಿಕೆ ಉಳ್ಳವ, ಸ್ವತಃ ನಿರ್ಮಿತ, ಲೋಕೋಪಯೋಗಿ ಎಂದು ಹೇಳುತ್ತಾ ಗುಲಾಬಿಯ ಸ್ವಭಾವವನ್ನು ಹಳಿಯುವ ವ್ಯಂಗ್ಯೋಕ್ತಿಗಳು ಪ್ರಭಾವಶಾಲಿಯಾಗಿವೆ.

'ನಿರಾಲಾ'ರ ಕೃತಿಗಳ ವೈಶಿಷ್ಟ್ಯವೆಂದರೆ ವಿಲಕ್ಷಣತೆ ಮತ್ತು ಸ್ವಂತಿಕೆ. ಅವರ ವ್ಯಕ್ತಿತ್ವದಲ್ಲಿನ ನಿರ್ಭೀತತೆ ಅವರ ಸಾಹಿತ್ಯದಲ್ಲಿಯೂ ಎದ್ದು ಕಾಣುತ್ತದೆ. ಅವರ ಪ್ರಾಮಾಣಿಕತೆಯೇ ಅವರ ಸಾಹಿತ್ಯದ ಯಶಸ್ಸಿನ ಗುಟ್ಟು. ಅವರು ಎಂದೂ ನಿಂತ ನೀರಾಗಲಿಲ್ಲ. ಯಾವ ಆತಂಕಕ್ಕೂ ಅಂಜದೆ ಹರಿದ ಗಂಗೆ. ಯಾರ ಹಂಗಿಗೂ ಒಳಗಾಗದ ಸ್ವಾಭಿಮಾನಿ ವ್ಯಕ್ತಿತ್ವ. ಇಂತಹ ವ್ಯಕ್ತಿಯನ್ನೇ ಅರ್ಥಮಾಡಿಕೊಳ್ಳುವುದು ಕಷ್ಟವಾದಾಗ ಅವರ ಕೃತಿಗಳನ್ನು ಮೆಚ್ಚುವ ಧೈರ್ಯವನ್ನು ಮಾಡಲು ಸಮಯ ಬೇಕಾಯಿತು. ಯಾವತ್ತೂ ಪ್ರತಿಭಾವಂತರು ತಮ್ಮ ಕಾಲಕ್ಕಿಂತ ಮುಂದೆ ಇರುತ್ತಾರೆ. ಅವರನ್ನು ಗುರುತಿಸಲು ತಡವಾಗುತ್ತದೆ. 'ನಿರಾಲಾ'ರವರು ಚಿರನವೀನರಾದರೂ ಸನಾತನದಿಂದ ಹೊರತಲ್ಲ. ಹೊಸ ಹೊಸ ವಿಚಾರಗಳ ಅಲೆಯೆಬ್ಬಿಸಿದರೂ ಭಾರತೀಯತೆಯಿಂದ ದೂರವಾಗಿಲ್ಲ. ಅವರ ಕಾವ್ಯದ ಹಿರಿಮೆಯಿರುವುದು ಭಾರತೀಯ ಸಂಸ್ಕೃತಿ, ದರ್ಶನ, ತಾತ್ವಿಕ ಏಕತೆಯನ್ನು ಅಂದಿನ ಸಮಾಜದ ಬದುಕಿನ ಜೊತೆ ಜೊತೆಗೇ ನೋಡುತ್ತ, ಸೋಗಿನ, ಡಾಂಭಿಕತೆಯ, ಯಾವುದೇ ರೀತಿಯ ಶೋಷಣೆಯ ಮೇಲ್ಪದರವನ್ನು ನಿರ್ದಾಕ್ಷಿಣ್ಯವಾಗಿ ಕಿತ್ತೆಸೆಯುತ್ತಾ, ಒಳಗಿನ ನಿರ್ಮಲವಾದ ಮನಸ್ಸನ್ನು, ಮಾನವೀಯತೆಯನ್ನು ಮಾನವೀಯ ಕಾರುಣ್ಯವನ್ನು ಎತ್ತಿಹಿಡಿಯುವುದರಲ್ಲಿ.

'ನಿರಾಲಾ' ಛಾಯಾವಾದ, ಪ್ರಗತಿವಾದ, ಪ್ರಯೋಗವಾದ ಮೊದಲಾದ ಪ್ರವೃತ್ತಿಗಳನ್ನು ಸಹಜವಾಗಿಯೇ ಮೈಗೂಡಿಸಿಕೊಂಡಿದ್ದರೂ ಅವರು ಯಾವ ವಿಶಿಷ್ಟ ವಾದಕ್ಕೂ ಅಂಟಿಕೊಳ್ಳದೆ ತನ್ನದೇ ದಾರಿಯಲ್ಲಿ ನಡೆದವರು. ಪ್ರಕೃತಿಯ ವಿಭಿನ್ನ ಮುಖಗಳನ್ನು ಬಹಳ ಸುಂದರವಾಗಿ ಬಳಸಿಕೊಂಡು ಹೊಸ ಹೊಸ ಪ್ರತೀಕಗಳನ್ನು ನೀಡಿದರು. ಅವರ ಕಾವ್ಯಯಾತ್ರೆ 'ಜುಹೀ ಕೀ ಕಲೀ' (ಜಾಜಿ ಹೂ-ಪ್ರಣಯ ಚಿತ್ರ)ಯಿಂದ 'ಕುಕುರಮುತ್ತಾ' (ನಾಯಿಕೊಡೆ-ದೀನ ಹೀನರ ಪ್ರತೀಕ)ವರೆಗೆ ಸಾಗಿದೆ. ಈ ಮಧ್ಯೆ ಪುರಾಣದ 'ರಾಮ'ನಲ್ಲಿ (ರಾಮಕೀ ಶಕ್ತಿಪೂಜಾ) ಉತ್ತರಭಾರತವನ್ನು 'ರಾಮಮಯ' ವಾಗಿಸಿದ 'ತುಲಸೀದಾಸ' ('ತುಲಸೀದಾರ' ಕಾವ್ಯ)ರಲ್ಲಿ ತಮ್ಮ ಬಿಂಬವನ್ನೇ, ತಮ್ಮ ಏಳು-ಬೀಳುಗಳನ್ನೇ ಕಾಣುವಷ್ಟು ಪ್ರಗತಿಶೀಲತೆ ಮತ್ತು ಪ್ರಯೋಗಶೀಲತೆ 'ನಿರಾಲಾ'ರ ಬಗ್ಗೆ ನಮ್ಮ ಗೌರವ ಹೆಚ್ಚಿಸುತ್ತದೆ. ನಿರಾಲಾರವರು 'ವಿಧವಾ'. 'ಭಿಕ್ಷುಕ', 'ತೋಡತೀ ಪತ್ಥರ್' ಕವಿತೆಗಳ ಮೂಲಕ ದೀನಹೀನ ಹೆಣ್ಣಿನ ಬಗ್ಗೆ, ದಲಿತರ ಬಗ್ಗೆ ಅನುಕಂಪ ತೋರಿದುದರ ಜೊತೆಗೆ ತಮ್ಮ ಜೀವನದಲ್ಲಿ ಅದಕ್ಕೆ ಹೆಚ್ಚು ಅನುಕಂಪ ಕಾರುಣ್ಯ ತೋರಿದರು. 'ನಿರಾಲಾ' ಸ್ವತಃ ಹಿಂದಿ ಸಾಹಿತ್ಯ ಜಗತ್ತಿಗೆ ಒಂದು ಅಪರೂಪದ ಅನುಪಮ ಕೊಡುಗೆ.

* * *

# ಜಾಜಿ ಮೊಗ್ಗು

ಹಿಂದಿ ಮೂಲ : ಸೂರ್ಯಕಾಂತ ತ್ರಿಪಾಠಿ 'ನಿರಾಲಾ'
ಅನು : ಡಾ॥ ಟಿ. ಜಿ. ಪ್ರಭಾಶಂಕರ 'ಪ್ರೇಮಿ'

ವಿಜನ-ವನ-ವಲ್ಲರಿಯ ಮೇಲೆ
ನಿದ್ರಿಸುತ್ತಿದ್ದಾಳೆ ಸುಹಾಗಿನಿ-
ಸ್ನೇಹ-ಸ್ವಪ್ನ-ಮಗ್ನ-ಅಮಲ-ಕೋಮಲ-ತನು ತರುಣಿ
ಜಾಜಿಯ ಮೊಗ್ಗು
ಕಣ್ಮುಚ್ಚಿ, ಹರಿದ ಪತ್ರಾಂಕದಲ್ಲಿ
ವಾಸಂತೀ ರಾತ್ರಿ
ವಿರಹ-ವಿಧುರ ಪ್ರಿಯಳ ಸಂಗ ಬಿಟ್ಟು
ಯಾವುದೋ ದೂರ  ದೇಶದಲ್ಲಿ ಪವನ
ಅದನ್ನೇ ಮಲಯಾನಿಲವೆಂಬರು
ನೆನಪಾಯಿತು ವಿರಹದಿ ಮೊದಲ ಮಿಲನದ ಆ ಮಧುರಮಾತು
ನೆನಪಾಯಿತು ಬೆಳದಿಂಗಳು ತೊಯ್ದ ಅರ್ಧ ರಾತ್ರಿ
ನೆನಪಾಯಿತು ಕಾಂತಳ ಕಂಪಿತ ಕಮನೀಯ ದೇಹ
ಮತ್ತೇನು? ಪವನ
ಉಪವನ-ಶರದೃತು-ಗಹನ ಗಿರಿ ಕಾನನ
ಕುಂಜ ಲತೆ ಪುಂಜಗಳ ಹಾದು
ಮೊಗ್ಗು ಹೂಗಳ ಜೊತೆ ಕೇಲಿ ಆಡುತ
ತಲುಪಿತು
ನಿದ್ರಿಸುತ್ತಿದ್ದಳು
ಹೇಗೆ ತಿಳಿಯಿತೋ ಪ್ರಿಯಕರನಾಗಮನ?
ನಾಯಕ ಚುಂಬಿಸಿದ ಕಪೋಲ
ವಲ್ಲರಿ ತೂಗಿತು ಉಯ್ಯಾಲೆಯೊಲು

ಆದರೂ ಎಚ್ಚರಾಗಲಿಲ್ಲ
ತಪ್ಪಿಗೆ ಕ್ಷಮೆಯಾಚಿಸಲಿಲ್ಲ.
ನಿದ್ರಾಲಸ ಬಂಕಿಮ ವಿಶಾಲ ನೇತ್ರ ಮುಚ್ಚಿದ್ದವು-
ಅಥವಾ ಯೌವನದ ಮದಿರೆ ಕುಡಿದು ಮತ್ತಳಿರಬಹುದೆ?
ನಿರ್ದಯದಿ ಆ ನಾಯಕನು
ನಿಷ್ಠುರತೆಯಿಂದ
ಪೊದೆಗಳ ನೂಕಾಡಿದ
ಸುಂದರ ಸುಕುಮಾರ ದೇಹವಿಡೀ ಕುಲುಕಾಡಿದ
ಒಸಗಿದ ಗೌರ ಗುಂಡು ಕಪೋಲಗಳ;
ಬೆಚ್ಚಿದಳು ಯುವತಿ
ಬೆರಗಾದ ಕಟಾಕ್ಷವ ಎಲ್ಲೆಡೆ ಬೀರಿ
ಕಂಡು ಪ್ರಿಯನ ಶಯ್ಯೆಯ ಬಳಿ
ನಮ್ರವದನೆ ನಕ್ಕಳು ಅರಳಿತು
ಪ್ರಿಯನೊಡನೆ ಕೇಲಿರಾಗ

* * *

# ಕಲ್ಲು ಕುಟ್ಟುವವಳು

ಹಿಂದಿ ಮೂಲ : ಸೂರ್ಯಕಾಂತ ತ್ರಿಪಾಠಿ 'ನಿರಾಲಾ'
ಅನು : ಡಾ॥ ಟಿ. ಜಿ. ಪ್ರಭಾಶಂಕರ 'ಪ್ರೇಮಿ'

ಕಲ್ಲು ಕುಟ್ಟುವವಳ
ನೋಡಿದೆ ನಾನು ಅಲಹಾಬಾದಿನ ಹಾದಿಬದಿಯಲಿ
ಆ ಕಲ್ಲು ಕುಟ್ಟುವವಳ

ಇರಲಿಲ್ಲ ನೆರಳ ನೀಡುವ
ಮರ, ಅವಳು ಕುಳಿತುಕೊಂಡಲ್ಲಿ;
ಶ್ಯಾಮವರ್ಣೆ, ತುಂಬು ಯೌವನೆ
ನತ ನಯನ, ಪ್ರಿಯ-ಕರ್ಮ-ರತ ಮನಸು
ಕೈಯೊಳು ದೊಡ್ಡ ಸುತ್ತಿಗೆ
ಹೊಡೆಯುತ್ತಿದ್ದಾಳೆ ಮತ್ತೆ ಮತ್ತೆ:
ಎದುರು ಸಾಲುಮರ, ಮಹಡಿಮನೆ, ಪ್ರಾಕಾರ

ಬಿಸಿಲೇರುತಿದೆ:
ಬೇಸಿಗೆ ದಿನಗಳು
ಸೂರ್ಯನ ಮುಖಮಂಡಲ ಕೆಂಪಡರಿದೆ
ಬಿಸಿಗಾಳಿ ಬೀಸಿದೆ ಬೇಯಿಸುತ್ತ
ಹತ್ತಿಯೊಲು ಉರಿಯುತ್ತಿದೆ ಭೂಮಿ
ಧೂಳು ಕೆಂಡವಾಗಿಸಿ
ಪ್ರಾಯಃ ಮಧ್ಯಾಹ್ನವಾಗಿದೆ-
ಕಲ್ಲು ಕುಟ್ಟುತ್ತಿದ್ದಾಳೆ.

ನನ್ನ ನೋಡಿದ್ದ ನೋಡಿದೆ ಒಮ್ಮೆ
ಮತ್ತೆ ಆ ಭವನದ ಕಡೆ ನೋಡುವಳು, ತುಂಡಾದ ತಂತಿ;

ನೋಡಿದಳು ಯಾರೋ ಎಂಬ
ದೃಷ್ಟಿಯಿಂದ

ಹೊಡೆತ ತಿಂದೂ ಅಳದೆ
ಸಹಜ ವೀಣೆಯ ನಾದ
ಕೇಳಿದೆ ನಾದ, ಆ ಝುಂಕಾರವಿರಲಿಲ್ಲ
ಒಂದು ಕ್ಷಣ, ಕಳೆದಂತೆ, ಕಂಪಿಸಿದಳು ಸುಂದರಿ
ಹಣೆಯಿಂದಿಳಿದವು ಬೆವರ ಹನಿಗಳು
ಲೀನವಾಗಿ ತನ್ನ ಕಾಯಕದಲ್ಲಿ ಹೇಳಿದಂತೆ-
''ನಾನು ಕಲ್ಲು ಕುಟ್ಟುವವಳು''

* * *

# ಮಲೇಶ್ವರ

ಭಾರತೀಯ ಕಥಾಲೋಕದಲ್ಲಿ ಕಮಲೇಶ್ವರ ಹೊಸ ಮನ್ವಂತರದ ಹರಿಕಾರ.

ಹಿಂದೀ ಕಥಾ ಸಾಹಿತ್ಯದಲ್ಲಿ ಹೊಸ ಬೆಳೆ ಬಂದುದು, ಅದು 'ಆಧುನಿಕ' ಅನ್ನಿಸಿಕೊಂಡದ್ದು ಮಲೇಶ್ವರ, ಮೋಹನ ರಾಕೇಶ್, ರಾಜೇಂದ್ರ ಯಾದವರಿಂದ ಎಂದು ಹೇಳಿದರೂ ಅದರ ್ರೇಯಸ್ಸಿನ ಸಿಂಹಪಾಲು ಕಮಲೇಶ್ವರ ಅವರದು.

'ಸಾರಿಕಾ'ದ ಸಂಪಾದಕರಾಗಿ ಕಮಲೇಶ್ವರ ಮಾಡಿದ ಕೆಲಸ ಭಾರತದ ಯಾವ ಲೇಖಕನೂ ಮಾಡಲಿಲ್ಲ ಎಂಬುದನ್ನು ಹೇಳಿದರೆ ಸತ್ಯವನ್ನೇ ಹೇಳಿದಂತಾಗುತ್ತದೆ. 'ಸಾರಿಕಾ'ದ ಮುಖಾಂತರ ಮಲೇಶ್ವರ ನೂರಾರು ಪ್ರತಿಭೆಗಳನ್ನು ಬೆಳಕಿಗೆ ಪರಿಚಯಿಸಿದ.

ಅವರ ಕಥೆಗಳಲ್ಲಿ ಸೃಷ್ಟಿಗೊಳ್ಳುವ ಪಾತ್ರಗಳು ರಕ್ತ, ಮಾಂಸದಿಂದ ಕೂಡಿದ್ದವುಗಳು. ಅವುಗಳನ್ನು ಮುಟ್ಟಿ ತಟ್ಟಿ ಆನಂದಿಸಬಹುದಾಗಿದೆ.

ಅವರ ಬಹಳಷ್ಟು ಕಥೆಗಳು ಜಗತ್ತಿನ ಬಹುಭಾಷೆಗಳಲ್ಲಿ ಅನುವಾದಗೊಂಡಿವೆ. ಇಲ್ಲಿರುವ ಈ ಕಥೆ 'ಸವಾ ಎಂಟು ಗಂಟೆಯಾಗಿತ್ತು'– ಓದುಗನ ಹೃದಯದ ಬಡಿತ ನಿಲ್ಲಿಸುತ್ತದೆ. ಅಷ್ಟೊಂದು ಶಕ್ತಿಶಾಲಿಯಾಗಿದೆ, ಕರುಣಪೂರಿತವಾಗಿದೆ. ಹೃದಯವನ್ನು ತಲ್ಲಣಗೊಳಿಸುತ್ತದೆ. ಕಮಲೇಶ್ವರ ಶ್ರೇಷ್ಠ ಕಥೆಗಾರನಾಗಿರುವಂತೆ ಓರ್ವ ಸ್ನೇಹಜೀವಿ ಕೂಡ.

# ಸವಾ ಎಂಟು ಗಂಟೆಯಾಗಿತ್ತು

ಹಿಂದಿ ಮೂಲ : **ಕಮಲೇಶ್ವರ**

ಅನು : **ಡಾ। ಪಂಚಾಕ್ಷರಿ ಹಿರೇಮ**

ಮುಕ್ಕಾಂ : ಚಾಂದನೀ ಚೌಕ್

ಲಾಲಕಿಲ್ಲೆಯಿಂದ ಫತಹಪುರಿವರೆಗೆ ಹೋಗುವಷ್ಟು ದೂರದ ಹಾದಿ.

ನಾನು ಬಿಲ್ಲೀ ಮಾರಾನದ ಹತ್ತಿರ ಸ್ಕೂಟರಿನಿಂದ ಅದೇ ಇಳಿದಿದ್ದೆ. ಚಮನ್ ಕಾಣಿಸಿದ. ಅಲ್ಲಿ ನನಗೆ ಯಾವ ಕೆಲಸವೂ ಇರಲಿಲ್ಲ. ಹಳೆ ದಿಲ್ಲಿ ನೋಡಬೇಕೆನ್ನಿಸಿ ಜಾಮಾ-ಮಸೀದಿಯ ವರೆಗೂ ಹೋಗಿ ಇಲ್ಲಿಗೆ ಬಂದಿದ್ದೆ.

ಒಮ್ಮೆಲೇ ಚಮನ್ ನನಗೆ ಗುರುತು ಸಿಗಲಿಲ್ಲ. ಅವನು ತುಂಬ ಬದಲಾಗಿರುವಂತೆ ಕಂಡ. ಏನಿಲ್ಲವೆಂದರೂ ನಾನು ಅವನನ್ನು ಹತ್ತು ವರ್ಷಗಳ ನಂತರ ನೋಡುತ್ತಿದ್ದೇನೆ. ದೇಶ ವಿಭಜನೆ ಆದಾಗ ಅವನು ನನ್ನ ಊರಿಗೆ ಬಂದಿದ್ದ. ಅಲ್ಲಿ. ಆತ ಯಾವುದಾದರೂ ವ್ಯಾಪಾರ ಆರಂಭಿಸಬೇಕೆಂದು ಪ್ರಯತ್ನ ನಡೆಸಿದ್ದ. ಆದರೆ ಆ ಸಣ್ಣ ಪಟ್ಟಣದಲ್ಲಿ ಆತ ಮೂರು ವರ್ಷಗಳ ವರೆಗೂ ತಾನೊಬ್ಬ 'ಅಸಾಮಿ' ಆಗಬೇಕೆಂದು ಎಷ್ಟು ಪ್ರಯತ್ನಿಸಿದರೂ ಅದು ಸಾಧ್ಯವಾಗದೇ ಹೋದಾಗ, ದಿಲ್ಲಿಗೆ ಹೊರಟು ಬಂದಿದ್ದ. ಆ ನಂತರ ನಾನು ಒಂದು ರೀತಿಯಲ್ಲಿ ಆತನನ್ನು ಮರೆತೇಬಿಟ್ಟಿದ್ದೆ. ಈಗ ಆತನನ್ನು ನೋಡಿದ ಕೂಡಲೇ ಈ ಮನುಷ್ಯನನ್ನು ಎಲ್ಲಿಯೋ ನೋಡಿದ್ದೇನೆ. ಅಷ್ಟೇ ಅಲ್ಲ ಈತನೊಂದಿಗೆ ಚೆನ್ನಾಗಿ ಮಾತು ಕೂಡ ಆಡಿದ್ದೇನೆ... ಎಂಬುದರ ನೆನಪು ಮಾತ್ರ ಆಯಿತು.

ನಾನು ಈ ನೆನಪಿನಲ್ಲಿರುವಾಗಲೇ ಚಮನ್ ನನ್ನನ್ನು ಕೂಗಿ ಕರೆದ. ನಾನು ಅವನನ್ನು ಚೆನ್ನಾಗಿ ನೋಡಿದೆ ಹಾಗೂ ಅವನ ಧ್ವನಿಯನ್ನೂ ಕೇಳಿದೆ. ಆಗ ಆತ ಯಾರು ಎಂಬುದರ ಎಲ್ಲ

ನೆನಪು ಮರುಕಳಿಸಿತು. ಈತ ಅದೇ ಚಮನ್. ನನ್ನ ಸಣ್ಣಪಟ್ಟಣದಲ್ಲಿ ಹತ್ತು ವರ್ಷಗಳ ಮೊದಲು ಇದ್ದವ..... ನಮ್ಮಿಬ್ಬರಲ್ಲಿ ಸ್ನೇಹ ಉಂಟಾಗಿ ಕೆಲವೇ ದಿನಗಳಾಗಿದ್ದವು. ಆತ ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿದ್ದ ಹಾಗೂ ತನ್ನ ಹೆಂಡತಿ ಸತವಂತಿಯ ಪರಿಚಯ ಮಾಡಿಸಿದ್ದ. ನಾನೋ ಸತವಂತಿಯನ್ನು ನೋಡಿ ಅಚ್ಚರಿಪಟ್ಟಿದ್ದ. ಚಮನ್‌ನಂಥ ಓರ್ವ ತೀರ ಸಾಮಾನ್ಯ ಮನುಷ್ಯನ ಹೆಂಡತಿ ಇನಿತು ಚೆಲುವೆಯಾಗಿರಬಹುದೆಂದು ನಾನು ಕನಸು ಮನಸ್ಸಿನಲ್ಲಿಯೂ ಯೋಚಿಸಿರಲಿಲ್ಲ.

ಸತವಂತಿಯಲ್ಲಿ ಒಂದು ಅಭೂತಪೂರ್ವವಾದ ಕಳೆ, ಓಜಸ್ಸಿತ್ತು. ಆಗ ನನಗೆ ಚಮನ್ ಬಗ್ಗೆ ಒಳಗೊಳಗೆ ಸಾತ್ವಿಕ ಈರ್ಷೆ ಕೂಡ ಉಂಟಾಯಿತು. ಬಹಳ ಹೊತ್ತಿನವರೆಗೂ ಅವನ ಒಂದು ಕೋಣೆಯ ಮನೆಯಲ್ಲಿ ಕುಳಿತುಕೊಂಡಿದ್ದೆ. ಆ ಕಾಲದಲ್ಲೆಲ್ಲ ಸತವಂತಿ ಸದಾಕಾಲ ನನ್ನೆದುರಿಗೆ ಕುಳಿತುಕೊಂಡಿರಬೇಕು ಹಾಗೂ ನಾನು ಅವಳನ್ನು ಅನಿಮಿಷನೇತ್ರನಾಗಿ ನೋಡುತ್ತಿರಬೇಕು-ಎಂದು ನನ್ನ ಮನಸ್ಸು ತುಡಿಯುತ್ತಲಿತ್ತು.

ನನಗೆ ಈಗಲೂ ನೆನಪಿದೆ-ಚಹಾ ಮಾಡಿಕೊಂಡು ಬಂದ ನಂತರ- ನನ್ನ ಮನಸ್ಸು ಅಂದು ಕೊಂಡಂತೆ-ಸತವಂತಿ ನನ್ನ ಮುಂದೆಯೇ ಬಂದು ಕುಳಿತುಕೊಂಡಳು. ಕೆಲವೊಮ್ಮೆ ಹೀಗೆಯೇ ಆಗುತ್ತದೆ. ಮನ ಬಯಸಿದಂತೆ ಎಲ್ಲವೂ ನಡೆಯುತ್ತದೆ. ಮಾತನಾಡುತ್ತಿರುವಂತೆ ಸತವಂತಿಯ ರೂಪ, ಚೆಲುವು ನನ್ನನ್ನು ತುಂಬ ಪೀಡಿಸುತ್ತಲೇ ಇತ್ತು. ಬಹುಶಃ ನಾನೇಕೆ ಪೀಡೆಗೆ ಒಳಗಾಗಿರುವೆಯೆಂಬುದು, ಅವಳಿಗೆ ಗೊತ್ತಾಗಲು ಸಾಧ್ಯವೇ ಇರಲಿಲ್ಲ.

ನಾವು ಮೂವರೂ ಚಹಾ ಕುಡಿಯುತ್ತಲಿದ್ದೆವು. ಆ ಪಟ್ಟಣದಲ್ಲಿ ಯಾವ ಉದ್ಯೋಗ ಚೆನ್ನಾಗಿ ಸಾಗಬಹುದೆಂಬುದರ ಬಗ್ಗೆ ಮಧ್ಯೆ ಮಧ್ಯೆ ಚರ್ಚೆ ನಡೆಯುತ್ತಲೇ ಇತ್ತು. ಅದರೊಂದಿಗೆ ತನಗೇ ಗೊತ್ತಿಲ್ಲದಂತೆ ಆ ರೂಪವತಿ ಸತವಂತಿ ತನ್ನ ಕುರತಾದ (ಮೇಲಂಗಿ) ಮೇಲಿನ ಗುಂಡಿ ತೆಗೆಯುತ್ತ ಮತ್ತೆ ಹಾಕಿಕೊಳ್ಳುತ್ತಲಿದ್ದಳು. ಗುಂಡಿಯ ಬಿಚ್ಚುವ, ಹಾಕುವ ಸಪ್ಪಳ ನನ್ನನ್ನು ತುಂಬ ಯಾತನೆಗೀಡು ಮಾಡುತ್ತಿತ್ತು. ತುಂಬಿದ ಎದೆಯ ಮೇಲ್ಭಾಗ ಕಂಡಾಗಲೆಲ್ಲ ರೋಮಾಂಚನ ವಾಗುತ್ತಿತ್ತು. ನಾನು ಕಳ್ಳಗಣ್ಣಿನಿಂದ ಅತ್ತಲೇ ನೋಡುತ್ತಲಿದ್ದೆ. ಆಗಲೂ ಕೂತ ಅವಳು ತನಗೇನೂ ಗೊತ್ತಿಲ್ಲವೆನ್ನುವಂತಯೇ ವರ್ತಿಸುತ್ತಿದ್ದಳು. ನನ್ನ ಕಣ್ಣುಗಳು ಮಾತ್ರ ಅವಳ ಸುಪುಷ್ಟವಾದ, ಅಂದ-ಚಂದವಾದ ದೇಹವನ್ನು ನೋಡುವುದರಲ್ಲಿ ತಲ್ಲೀನಗೊಂಡಿದ್ದವು. ನಾನು ಎಷ್ಟೆಲ್ಲ ಕಾಲ ಅಲ್ಲಿ ಇದ್ದೆನೊ, ಅಷ್ಟೂ ಹೊತ್ತು ತೆರೆಯುವ ಹಾಕುವ ಗುಂಡಿಯ ಸಪ್ಪಳ ಮಾತ್ರ ನನ್ನನ್ನು ಅಶಾಂತಿಗೆ ಈಡು ಮಾಡುತ್ತಲೇ ಇತ್ತು. ಇಂದಿಗೂ ನನಗೆ ಚೆನ್ನಾಗಿ ನೆನಪಿದೆ ಅದೆಲ್ಲ. ಈಗ ಚಮನ್ ಕಂಡ ಕೂಡಲೇ, ನನ್ನ ಮನ ಅದೇ ತೆರೆಯುವ-ಹಾಕುವ ಗುಂಡಿಯ ಸಪ್ಪಳ ಕೇಳಲಾರಂಭಿಸಿತು. ಅದೇ ಕೋಣೆಯಲ್ಲಿ ಗೋಡೆಗೆ ಒಂದು ವಾಲ್‌ಕ್ಲಾಕ್ ಇತ್ತು. ಅದರ ಪೆಂಡುಲಮ್ ಅತ್ತಿತ್ತ ಅಲುಗಾಡುತ್ತ ಸಪ್ಪಳ ಮಾಡುತ್ತಿತ್ತು. ಕೆಲವೊಮ್ಮೆ ಸತವಂತಿ ತೆರೆಯುವ ಹಾಕುವ ಗುಂಡಿಯ ಸಪ್ಪಳ ಆ ವಾಲ್‌ಕ್ಲಾಕ್ ಮಾಡುವ ಟಿಕ-ಟಿಕ್ ಸಪ್ಪಳದಲ್ಲಿ ಮಾಯವಾಗುತ್ತಿತ್ತು. ಸತವಂತಿ ನನಗೆ ಚಮನ್‌ಗಿಂತಲೂ ಹೆಚ್ಚು ನೆನಪಿಗೆ ಬರುತ್ತಾಳೆ... ಹೆಚ್ಚು ಕಾಡಿಸುತ್ತಾಳೆ.... ಅಂತೆಯೇ ದಿಲ್ಲಿಯ ಈ ಗಲ್ಲಿಯಲ್ಲಿ ಚಮನ್‌ನನ್ನು ಗುರುತಿಸಿದ ತಕ್ಷಣ, ಸತವಂತಿಯ ನೆನಪು ಹಸಿರಾಯಿತು.... ಆಗಲೇ ಚಮನ್ ನನ್ನನ್ನು ಕೇಳಿದ- "ದಿಲ್ಲಿಗೆ ಯಾವಾಗ ಬರೋಣವಾಯಿತು?"

"ಸುಮಾರು ನಾಲ್ಕು ತಿಂಗಳು ಕಳೆದವು" ಎಂದಾಗ ಅವನು "ಇಲ್ಲಿಯೇ ಎಲ್ಲಿಯಾದರೂ ನೌಕರಿ ಮಾಡಿಕೊಂಡಿದ್ದೀಯಾ?" ಎಂದ. ಅದಕ್ಕೆ ನಾನು "ನೌಕರಿಗಾಗಿಯೇ ಇಲ್ಲಿಗೆ ಬಂದಿರುವೆ. ಇನ್ನು ಮೇಲೆ ಇಲ್ಲಿಯೇ ಇರುವೆ" ಎಂದು ಹೇಳಿದೆ. ಆದರೆ ಚಮನ್‌ನ ಇರುವಿಕೆ ನೋಡಿ ಒಮ್ಮೆಲೇ ಅವನ ಬಗ್ಗೆ ವಿಚಾರಿಸಲು ಧೈರ್ಯವಾಗಲಿಲ್ಲ. ಚಳಿಯಿಂದಾಗಿ ಚಮನ್‌ನ ಮುಖದ ಮೇಲೆ ಒಂದು ವಿಚಿತ್ರವಾದ ಕಳಾಹೀನತೆ ನೆಲೆಸಿತ್ತು. ಕೂದಲುಗಳು ಅಲ್ಲಲ್ಲಿ ಬೆಳ್ಳಗಾಗಿದ್ದವು. ಅವನ ಶಕ್ತಿಹೀನ ಬೆರಳಿನಲ್ಲಿದ್ದ ಕಪ್ಪು ಶಿಲೆಯ ಉಂಗುರ ಕಪ್ಪೆಯ ಕಣ್ಣಿನ ಹಾಗೆ ತೋರುತ್ತಿತ್ತು. ಅವನು ತೊಟ್ಟ ಅಂಗಿ ಕೂಡ ಹೊಲಸಾಗಿತ್ತು ಹಾಗೂ ಪ್ಯಾಂಟ್ ಪೈಜಾಮಾದ ಹಾಗೆ ದುಂಡಗಾಗಿತ್ತು. ಕೋಟ್ ಕೂಡ ಲಳಗಾಬಳಗಾ, ಅಂಗಿಯ ಅಗಲವಾದ ಅಮೆರಿಕನ್ ಕಾಲರ್‌ನಲ್ಲಿ ಒಣಗಿದ ಹೂವೊಂದು. ತಂತಿಯ ಮೇಲೆ ಕುಳಿತ ಬಣ್ಣ ಬಣ್ಣದ ಗಿಳಿಯೊಂದು ಸತ್ತಿದೆ-ಎನ್ನುವ ಹಾಗೆ ತೋರುತ್ತಲಿದೆ. ಕಟ್ಟಿದ ಟೈ ಗಂಟು ಸಾಕಷ್ಟು ಹೊಲಸಾಗಿತ್ತು.

ನಾನು ಎದುರುಗಡೆ ಸನ್ನೆ ಮಾಡುತ್ತ ಕೇಳಿದೆ-

"ಅಲ್ಲಿ ಕಾಣುವ ಆ ಸ್ಥಳ ಯಾವುದು?"

"ಫತೆಹಪುರಿ ಮಸೀದಿ" ಎಂದು ಹೇಳಿದಾಗ, ನಾವಿಬ್ಬರೂ ಅದನ್ನು ನೋಡಲು ಹೊರಟೆವು. ತುಂಬ ದೊಡ್ಡದಾದ ಹಜಾರ-ಅದರಲ್ಲೆಲ್ಲ ಪಾವಿತ್ರ್ಯದ ಸುಗಂಧವಿತ್ತು. ಶಾಂತಿಯ ಪ್ರತೀಕವಾದ ಪಾರಿವಾಳಗಳ ಗುಂಪೊಂದು ಅಂಗಳದಲ್ಲಿ ಅಲ್ಲಲ್ಲಿ ಬಿದ್ದ ಕಾಳುಗಳನ್ನು ತಿನ್ನುತ್ತ, ತೃಪ್ತಿಯಿಂದ ಗುಟರ್..... ಗುಟರ್........ ಎನ್ನುವ ಅವುಗಳ ಧ್ವನಿ ಜೀವ ತೃಪ್ತಿಯ ಸಂಕೇತವಾಗಿ ತೋರುತ್ತಿತ್ತು.....

"ಯಾವ ಕೆಲಸ, ಉದ್ಯೋಗ ಮಾಡುತ್ತಿರುವೆ?" ಎಂದು ಅಲ್ಲಿಯೇ ಇದ್ದ ಕಲ್ಲುಬೆಂಚಿನ ಮೇಲೆ ಕೂಡುತ್ತ ಕೇಳಿದಾಗ ಚಮನ್ ಅತೀವ ತಗ್ಗಿದ ದನಿಯಲ್ಲಿ ಹೇಳಿದ್ದ "ಗಡಿಯಾರಗಳದ್ದು."

"ಅಂಗಡಿ ಎಲ್ಲಿದೆ?"

"ಇಲ್ಲಿಯೇ ಚಾಂದನೀ ಚೌಕದಲ್ಲಿ - ಇನ್ನೋರ್ವ ವ್ಯಾಪಾರಿಯೊಂದಿಗೆ ಕೂಡಿಕೊಂಡು ನಡೆಸಿದ್ದೇನೆ. ಇಲ್ಲಿ ಅಂಗಡಿಗಳು ಸಿಗುವುದು ಕಷ್ಟ. ಹೀಗಾಗಿ ಈಗಿರುವ ಅಂಗಡಿಯಲ್ಲಿ ಬೆಳಗಿನಿಂದ ಸಾಯಂಕಾಲ ನಾಲ್ಕು ಗಂಟೆಯವರೆಗೆ ನನ್ನ ಗಡಿಯಾರಗಳನ್ನಿಟ್ಟುಕೊಂಡು ವ್ಯಾಪಾರ ಮಾಡುತ್ತೇನೆ. ಆ ನಂತರ ಇನ್ನೊಬ್ಬಾತ ಬಂದು ತನ್ನ ವ್ಯವಹಾರ ಆರಂಭಿಸುತ್ತಾನೆ. ನಾನು ನನ್ನ ಗಡಿಯಾರಗಳನ್ನೆಲ್ಲ ಕಟ್ಟಿಕೊಂಡು ಮನೆಗೆ ಹೋಗುತ್ತೇನೆ."

"ಅಂತೂ ಚಾಂದನೀ ಚೌಕದಂಥ ಸ್ಥಳದಲ್ಲಿ ನಿನಗೆ ವ್ಯಾಪಾರ ಮಾಡಲು ಅಂಗಡಿ ಸಿಕ್ಕಿರುವುದು ಬಹು ದೊಡ್ಡ ಸಂಗತಿಯೇ ಸರಿ" ಎಂದು ನಾನು ಹೇಳಿದಾಗ ಅದೇಕೋ ಚಮನ್‌ನ ಮುಖದಲ್ಲಿ ಬಾಡಿದ ಮುಗುಳುನಗೆಯೊಂದು ಮೂಡಿ ಮಾಯವಾಯಿತು. ಮತ್ತೆ ಆತ "ಹಾಂ! ಸ್ಥಳವೇನೋ ಅಪರೂಪದ್ದೇ. ಆದರೆ ಉದ್ದೇಶಿತ ಕೆಲಸ ಮಾತ್ರ ಆಗುತ್ತಿಲ್ಲ. ಇಲ್ಲಿ ಗಡಿಯಾರಗಳ ಅಂಗಡಿಗಳು ಹೆಚ್ಚಾಗಿವೆ. ಹೀಗಾಗಿ ನನ್ನಲ್ಲಿಯ ಗಡಿಯಾರಗಳ ವ್ಯಾಪಾರ ಹೆಚ್ಚಾಗಿ ಆಗುತ್ತಿಲ್ಲ. ರಿಪೇರಿ ಕೆಲಸಕ್ಕೂ

ಗಿರಾಕಿಗಳು ದೊಡ್ಡ ದೊಡ್ಡ ಅಂಗಡಿಗಳಿಗೇ ಹೋಗುತ್ತಾರೆಯೆ ಹೊರತು ನನ್ನ ಸಣ್ಣ ಅಂಗಡಿಯತ್ತ ಕಣ್ಣು ಕೂಡ ಹಾಯಿಸುವುದಿಲ್ಲ" ಎಂದು ಹೇಳಿದ.

ಅದು-ಇದು ಮಾತನಾಡಿ ನಾನು ಸತವಂತಿಯ ವಿಷಯಕ್ಕೆ ಬರುವವನಿದ್ದೆ. ಅಷ್ಟರಲ್ಲಿ ಅವನೇ "ನಡಿ, ಮನೆಗೆ ಹೋಗೋಣ' ಎಂದಾಗ ನಾನು ಕೂಡಲೇ ಅವನೊಂದಿಗೆ ಹೊರಡಲು ಸಿದ್ಧನಾದೆ. ಆದರೆ ಆತನ ಮನೆಯೆಲ್ಲಿದೆಂಬುದನ್ನು ಅವಶ್ಯ ಕೇಳಿದೆ. ಆಗ ಆತ ಟೌನ್‌ಹಾಲ್ ಪಕ್ಕದಲ್ಲಿ ಒಳಗೆ ಒಂದು ಸಂದಿಯಲ್ಲಿ ಒಂದು ಕೋಣೆ ಎಂದು ಹೇಳಿದ.

ನಾವು ಇಬ್ಬರೂ ಮನೆಯೆಂಬ ಕೋಣೆಯತ್ತ ಹೊರಟೆವು. ಕೋಣೆಯ ಎದುರು ನಿಂತಾಗ ಕೋಣೆಗೆ ಬೀಗ ಹಾಕಿದೆ. ಚಮನ್ ಕೀಲಿಕೈಗಾಗಿ ಕಿಸೆಯಲ್ಲಿ ಕೈ ಹಾಕಿದಾಗಲಂತೂ ನನ್ನೆಲ್ಲ ಉತ್ಸಾಹಕ್ಕೆ ತಣ್ಣೀರು ಎರಚಿದ ಅನುಭವ. ಕೂಡಲೇ ನಾನು - "ಭಾಭೀ (ಅತ್ತಿಗೆ) ಹೊರಗೆ ಹೋಗಿದ್ದಾರೇನು?" ಎಂದು ಕೇಳಿಯೆಬಿಟ್ಟೆ ತಡೆಯಲಾರದೆ. ಅದಕ್ಕೆ ಆತನಿಂದ ಯಾವ ಉತ್ತರವೂ ಬರಲಿಲ್ಲ. ಕೋಣೆಯ ತುಂಬ ಕತ್ತಲು ಆವರಿಸಿತ್ತು. ಹಾಗೂ ಅದರಲ್ಲಿ ವಿಚಿತ್ರ ರೀತಿಯ ಗತಿಹೀನವಾದ ಗಾಳಿಯ ವಾಸನೆಯಿತ್ತು.

ಮಿಣಕ್ ಎಂದು ಉರಿವ ಸಣ್ಣ ಓಲ್ಟಿನ ಬಲ್ಬಿನ ಬೆಳಕಿನಲ್ಲಿ ಕೋಣೆಯ ವ್ಯಥಾಪೂರ್ಣ ದುಃಖ ಇನ್ನೂ ಆಳವಾಯಿತು. ಅಲ್ಲಿದ್ದ ಎಲ್ಲ ಸಾಮಾನುಗಳು ನನಗೆ ಅಪರಿಚಿತವಾದವುಗಳೇ. ಆದರೆ ಕೇವಲ ಒಂದು ವಸ್ತು ಮಾತ್ರ ನನಗೆ ಪರಿಚಿತ-ಅದುವೇ ಗೋಡೆಯ ಮೇಲೆ ತೂಗು ಹಾಕಿರುವ ಗಡಿಯಾರ.

ಆ ವಾಲ್-ಕ್ಲಾಕ್ ನೋಡಿದ ತಕ್ಷಣ ನನ್ನ ಹೃದಯದ ಬಡಿತ ಜೋರಾಯಿತು ಹಾಗೂ ನನಗೆ ಅನ್ನಿಸತೊಡಗಿತು-ಇನ್ನೇನು ಇಷ್ಟರಲ್ಲಿಯೇ ಇಲ್ಲಿಯೇ ಎಲ್ಲಿಂದಲಾದರೂ ಸತವಂತಿ ಹೊರಟು ನನ್ನೆದುರಿಗೆ ಬರುತ್ತಾಳೆ ಹಾಗೂ ತನ್ನ ಕುರತಾದ (ಅಂಗಿ) ಗುಂಡಿ ತೆರೆದು-ಹಾಕತೊಡಗುತ್ತಾಳೆ. ನಾನು ಕೆಲಕ್ಷಣಗಳ ನಂತರ ಆ ಗಡಿಯಾರದತ್ತ ನೋಡಿದೆ. ಓ! ಅದು ನಿಂತುಹೋಗಿದೆ! ಅದರಲ್ಲಿ ಸವಾ ಎಂಟು ಗಂಟೆಯಾಗಿತ್ತು. ಅದರ ಎರಡೂ ಮುಳ್ಳುಗಳು ಸತ್ತುಹೋದ ಜಾಡಬುಳದ ಕಾಲುಗಳ ಹಾಗೆ-ಒಂದೇ ಸ್ಥಳದಲ್ಲಿ ಅಂಟಿಕೊಂಡಿದ್ದವು.

ನಿಂತುಹೋಗಿರುವ ಆ ವಾಲ್-ಕ್ಲಾಕ್ ನೋಡಿ ನನ್ನೆದೆಯಲ್ಲಿ ಅಪಾರ ಯಾತನೆಯಾಗ ತೊಡಗಿತು. ನಾನು ಇಲ್ಲಿಗೆ ಬಂದುದು ಈ ಯಾತನೆ ಅನುಭವಿಸಲಲ್ಲ. ಹತ್ತು ವರ್ಷಗಳ ಹಿಂದೆ ನನ್ನ ಊರಿನಲ್ಲಿ ಚಮನ್‌ನ ಮನೆಯಲ್ಲಿ ನಾನು ಅನುಭವಿಸಿದ ಆ ಸುಖಪೂರ್ಣ ನೋವನ್ನು, ಮತ್ತೊಮ್ಮೆ ಅನುಭವಿಸುವ ಆಶೆಯಿಂದ ಇಲ್ಲಿಗೆ ಬಂದಿದ್ದೆ. ಅದೇ ಆ ರೂಪವತಿ ಸತವಂತಿ ತೆರೆದು ತೋರುವ ಆ ತುಂಬಿದೆದೆಯ ಸೊಗಸು, ಬಿಚ್ಚುವ-ಹಾಕುವ ಗುಂಡಿಯ ಆ ಸಪ್ಪಳ ಅದರೊಂದಿಗೇ ನನ್ನಲ್ಲಿ ಉಂಟಾಗುವ ರೋಮಾಂಚನದ ಸುಖದ ನೋವು!

ಈ ಚಾಂದನೀಚೌಕದಲ್ಲಿ ಬೇಕಾದಷ್ಟು ಹೊಳಪಿದೆ. ಮೇಲಂತಸ್ತಿನ ಕೋಣೆಗಳಲ್ಲಿ ಮನೆಗಳಲ್ಲಿ ಜೀವನದ ಚಲನಶೀಲತೆ ಸಾಕಷ್ಟಿದೆ. ಸಾವಿರಾರು ಜನರು ಗುಂಪುಗುಂಪಾಗಿ,

ಒಬ್ಬೊಬ್ಬರಾಗಿ ಹೋಗುವ-ಸಾವಿರಾರು ಜನರು ಈ ದಾರಿಯಲ್ಲಿ ಹೋಗಿ-ಬರುತ್ತಿದ್ದಾರೆ. ದೂರದಲ್ಲಿರುವ ಸ್ಟೇಶನ್‌ನಲ್ಲಿ ಉತ್ತರರೇಲ್ವೆಯ ಸಿಲ್ಲಾಣದಲ್ಲಿ ಝಗ-ಝಗಿಸುವ ಬೆಳಕು ಸುರಿಯುತ್ತಿರಬಹುದು. ಟೌನ್‌ಹಾಲ್‌ನ ಮುಂದೆ ಸ್ಕೂಟರುಗಳು, ಕಾರುಗಳ ಭರಭರಾಟೆ ಓಡಾಟ ಈಗಲೂ ಇರಬಹುದಾಗಿದೆ.

ವಿದ್ಯುತ್ತಿನ ತಂತಿಗಳ ಮೇಲೆ ಈಗಲೂ ಸಾವಿರಾರು ಪಾರಿವಾಳಗಳು ಕೂತುಕೊಂಡಿರ ಬಹುದು... ಚಮನ್ ಚಹಾ ಮಾಡಲೆಂದು ಸ್ಟೋ ಹಚ್ಚತೊಡಗಿದ್ದ. ಅದರ ಸಪ್ಪಳ ಕೋಣೆಯ ತುಂಬ ತುಂಬತೊಡಗಿತ್ತು. ಉರಿಯುತ್ತಿರುವ ಸೀಮೆಎಣ್ಣೆಯ ವಾಸನೆ ತುಂಬ ಕೆಟ್ಟದ್ದಾಗಿತ್ತು. ಆದರೆ ಸಾಯಂಕಾಲವೆಂದರೆ ಚಾಂದನೀ ಚೌಕಕ್ಕೆ ಹರೆಯ ತುಂಬಿಬರುತ್ತದೆ. ಅಲ್ಲಿ ಕೂಡಲಾಗಲಿಲ್ಲ.

“ನಾನು, ಒಂದು ನಿಮಿಷದಲ್ಲಿ ಬಂದೆ, ಇಲ್ಲೇ ಹೋಗಿ ಸಿಗರೇಟ್ ತರುತ್ತೇನೆ” ಎಂದು ಹೇಳಿದವನೇ ಹೊರಗೆ ರಸ್ತೆಗೆ ಬಂದೆ. ಅಲ್ಲಿ ಸುಳಿಯುತ್ತಿರುವ ಗಾಳಿಯಲ್ಲಿ ಉಸಿರಾಡಿದೆ. ಜೀವ ಬಂದ ಅನುಭವ. ಸ್ವಲ್ಪ ಹೊತ್ತು ಒಂದೆಡೆ ನಿಂತು ಸುತ್ತಲೂ ನೋಡಿದೆ.....

.... ಬಣ್ಣ ಬಣ್ಣದ ಉಡುಗೆ-ತೊಡುಗೆಗಳಲ್ಲಿ ಗಂಡು-ಹೆಣ್ಣು-ಮಕ್ಕಳು, ಅದು-ಇದು ಎಂದು ಖರೀದಿಸುವ ತವಕದಲ್ಲಿ ಮಗ್ನರಾಗಿದ್ದರು. ಯಾವುದೇ ಉದ್ದೇಶವಿಲ್ಲದೆ ಅತ್ತಿತ್ತ ತಿರುಗುವ ಷೋಕಿನ ಹುಡುಗ-ಹುಡುಗಿಯರು. ಓ! ಜೀವ ತುಂಬಿ ಬಂದ ಹಾಗಿತ್ತು ರಸ್ತೆಗೇ... ಒಂದು ಸುದೀರ್ಘವಾದ ರೀತಿಯಲ್ಲಿ ಮೆರವಣಿಗೆಯೊಂದು ಟೌನ್‌ಹಾಲ್‌ನ ಬಲಗಡೆಯ ಬಾಗಿಲಿನಿಂದ ಸ್ಟೇಶನ್‌ನ ಕಡೆಗೆ ಹೋಗುತ್ತಲಿದೆ... ದೂರ ಎತ್ತರದಲ್ಲಿ ಆಕಾಶದ ತುಂಬ ಎಂಥದೋ ಒಂದು ಧೂಳಿನ ಚಾದರ ಹಾಸಿದ ಹಾಗೆ ತೋರುತ್ತದೆ.... ಹಕ್ಕಿಗಳ ಕಾರವಾನ್‌ವೊಂದು ಮುಗಿಲ ದಾರಿಯಲ್ಲಿ ತಮ್ಮ ನೆರಳು ಬಿಂಬಿಸುತ್ತ ಮುಂದೆ ಮುಂದೆ ಸಾಗುತ್ತಲಿದೆ.

ಕಾಲುದಾರಿಯ ಮೇಲೆಯೇ ಅಲ್ಪ ಬೆಲೆಯ ಬಟ್ಟೆಗಳನ್ನಿಟ್ಟುಕೊಂಡು ಗಿರಾಕಿಗಳನ್ನು ಆಕರ್ಷಿಸುವುದಕ್ಕಾಗಿ ಅಂಗಡಿಯಾತ ಕೂಗುತ್ತಿದ್ದಾನೆ... ದೊಡ್ಡ ದೊಡ್ಡ ಅಂಗಡಿಗಳ ನೌಕರದಾರರು ಕೂಡ ಅಂಗಡಿಯ ಮುಂದೆ ಬಂದು ಗಿರಾಕಿಗಳನ್ನು ಬಹು ನಮ್ರತೆಯಿಂದ ತಮ್ಮ ಅಂಗಡಿಯಲ್ಲಿ ಬರಲು ವಿನಂತಿಸಿಕೊಳ್ಳುತ್ತಿದ್ದಾರೆ....

ಬೂಟು ಪಾಲಿಶ್ ಮಾಡುವ ಹುಡುಗರು ತಮ್ಮ ಪೆಟ್ಟಿಗೆ ಬಡಿಬಡಿದು, ಗಿರಾಕಿಗಳ ಗಮನ ತಮ್ಮತ್ತ ಸೆಳೆಯಲು ಪ್ರಯತ್ನಿಸುತ್ತಿದ್ದಾರೆ. ಶೀಸಗಂಜ ಗುರುದ್ವಾರದಿಂದ ಶಬದ (ಪ್ರಾರ್ಥನೆ-ಗುರುಗ್ರಂಥ ಸಾಹೇಬ ಪಠಣ) ಮಂದವಾಗಿ ಸುಳಿವ ಸಮೀರಣದೊಂದಿಗೆ ಮಧುರವಾಗಿ ಕೇಳಿಬರುತ್ತದೆ. ಕೆಲ ಕೈದಿಗಳನ್ನು ಮೋಟರಿನಲ್ಲಿ ಹಾಕಿಕೊಂಡು ಬಂದ ಪೋಲೀಸರು ಚಾಂದನೀ ಚೌಕದ ಪೋಲೀಸ್ ಸ್ಟೇಶನ್‌ದೊಳಗೆ ಹೋಗುತ್ತಿದ್ದಾರೆ.... ಈ ಎಲ್ಲ ದೃಶ್ಯಗಳನ್ನು ನೋಡುತ್ತ ಮೈಮರೆತಿದ್ದ ನನಗೆ ಒಮ್ಮೆಲೇ ಚಮನ್ ಚಹಾ ಮಾಡಿಕೊಂಡು ನನಗಾಗಿ ಕಾಯುತ್ತಿರಬಹುದೆಂಬುದು ನೆನಪಾಗಿ-ಅಲ್ಲಿಗೆ ಹೋಗಲು ಮನಸ್ಸಿಲ್ಲದಿದ್ದರೂ-ಸಿಗರೇಟ್ ಖರೀದಿ ಮಾಡಿಕೊಂಡು ಹೋದೆ.

ಚಮನ್ ಕಾಟ್ ಮೇಲೆ ತಲೆ ಹಿಡಿದುಕೊಂಡು ಕುಳಿತಿದ್ದ ಹಾಗೂ ಸ್ಟೋ ಗುರ್....

ಬರ್ ಸಪ್ಪಳ ಮಾಡುತ್ತಿತ್ತು... ಕೊನೆಗೂ ನಾನು ಸಹಿಸಲಾರದೆ ಕೇಳಿಯೇಬಿಟ್ಟೆ- "ಭಾಭಿ ಎಲ್ಲಿಗೆ ಹೋಗಿದ್ದಾರೆ?" ಎಂದು. ಅದಕ್ಕೆ ಉತ್ತರವಾಗಿ ಚಮನ್ ತುಂಬ ದುಃಖದಿಂದ ಹೇಳಿದ - "ಸತವಂತಿ ತೀರಿಹೋದಳು". ಈ ಉತ್ತರ ಕೇಳಿ ನನಗೆ ಏನು ಹೇಳಲೂ ತೋಚದೆ ಹೋಯಿತು. ಆದರೆ ನನ್ನೆದೆ ಜೋರಾಗಿ ಅತ್ತಿತು; ತೀವ್ರ ಆಘಾತ ಅನುಭವಿಸಿತು. ನಾನು ಸುಮ್ಮನೆ ಬರಬಡಿದವರಂತೆ ಕುಳಿತೆ ಹಾಗೂ ಹಚ್ಚಲೆಂದು ತಗೆದಿದ್ದ ಸಿಗರೇಟನ್ನು ಮತ್ತ ಪ್ಯಾಕೆಟ್‌ನಲ್ಲಿ ಸೇರಿಸಿದೆ.

ಚಹಾ ಮಾಡುತ್ತ ಒಮ್ಮೆ ಚಮನ್ ಗೋಡೆಯ ಮೇಲಿದ್ದ ವಾಲ್-ಕ್ಲಾಕ್‌ನತ್ತ ನೋಡುತ್ತ ತನ್ನೊಳಗೆ ತಾನು ಹೇಳಿಕೊಂಡ ಹಾಗೆ ಹೇಳಿದ "ಸತವಂತಿ ತೀರಿಕೊಂಡು ನಾಲ್ಕು ವರ್ಷಗಳಾದವು. ಇದೇ ಕೋಣೆಯಲ್ಲಿ ಸಾವು ಅವಳನ್ನು ನುಂಗಿ ನೀರು ಕುಡಿಯಿತು-ರಾತ್ರಿ ಸವಾ ಎಂಟು ಗಂಟೆಯಾಗಿತ್ತು ಆಗ."

ಒಮ್ಮೆಲೇ ನನ್ನ ದೃಷ್ಟಿ ವಾಲ್-ಕ್ಲಾಕ್ ಕಡೆ ಹೋಯಿತು. ಅದರಲ್ಲಿ ಸವಾ ಎಂಟು ಗಂಟೆಯಾಗಿತ್ತು. ಮತ್ತೆ ಮತ್ತೆ ನೋಡಿದೆ... ದಿಟ್ಟಿಸಿ ನೋಡಿದೆ... ಹೌದು ಅದರಲ್ಲಿ ಸವಾ ಎಂಟು ಗಂಟೆಯಾಗಿತ್ತು... ಆದರೂ ನನಗೆ ಅನ್ನಿಸತೊಡಗಿತ್ತು- ಈ ಗೋಡೆಯ ಗಡಿಯಾರ ಟಿಕ್ ....... ಟಿಕ್ ಎಂದು ಇನ್ನೇನು ಸಪ್ಪಳ ಮಾಡುತ್ತದೆ... ಅದರೊಂದಿಗೇ ಸತವಂತಿ ಎಲ್ಲಿಂದಲೋ ಇಷ್ಟರಲ್ಲಿ ಬಂದುಬಿಡುತ್ತಾಳೆ... ಎಂದು...

.... ಆ ಗೋಡೆಯ ಮೇಲೆ ಆ ಗಡಿಯಾರವನ್ನು ತೂಗುಹಾಕಲಾಗಿತ್ತು.......

...... ಆ ಗಡಿಯಾರದಲ್ಲಿ ಸವಾ ಎಂಟು ಗಂಟೆಯಾಗಿತ್ತು..... ಹಾಗೂ...... ಆ ಗಡಿಯಾರ ನಿಂತು ಹೋಗಿತ್ತು......

"ಅಗಿನಿಂದಲೇ ನಾನು ಈ ಗಡಿಯಾರವನ್ನು ನಿಲ್ಲಿಸಿಬಿಟ್ಟಿದ್ದೇನೆ" ಎಂದು ಚಮನ್ ಹೇಳುತ್ತ ಚಹಾದ ಕಪ್‌ನ್ನು ನನ್ನತ್ತ ನೀಡಿ ಹೇಳತೊಡಗಿದ "ಜೀವನ ತುಂಬ ಕಷ್ಟದ ತುತ್ತ ತುದಿ ತಲುಪಲಾರಂಭಿಸಿತ್ತು. ದಿಲ್ಲಿಯಲ್ಲಿ ಬಂದು 'ಮನುಷ್ಯ' ನಾಗಬಹುದೆಂದು ಎಣಿಸಿದ್ದೆ.. ಆದರೆ ಇಲ್ಲಿಗೆ ಬಂದನಂತರ ಸ್ಥಿತಿ ಇನ್ನಿಷ್ಟು ಕರುಣಾಜನಕವಾಯಿತು... ಸತವಂತಿ ಇಡೀ ದಿನ ಕಣ್ಣೀರಲ್ಲಿ ಕೈ ತೊಳೆಯುವಂತಾಯಿತು. ಆದರೂ ಆಕೆ ಎಂದೂ ಯಾವುದಕ್ಕಾಗಿಯೂ ನನ್ನನ್ನು ಪೀಡಿಸಲಿಲ್ಲ.... ಎಷ್ಟು ತರುತ್ತಿದ್ದೆನೋ ಅಷ್ಟರಲ್ಲಿಯೇ ಜೀವನ ಸಾಗಿಸುತ್ತಿದ್ದಳು.... ಇಲ್ಲಿಗೆ ಬಂದ ನಂತರ ಅವಳ ಆರೋಗ್ಯ ಕೆಡುತ್ತಲೇ ಹೋಯಿತು...." ಮಾತು ನಿಲ್ಲಿಸಿ ಚಹಾ ಕುಡಿಯತೊಡಗಿದ. ನಾನು ಅವನತ್ತ ನೋಡುತ್ತಲಿದ್ದೆ. ಕೆಲಕ್ಷಣಗಳ ನಂತರ ಮತ್ತೆ ಚಮನ್ ಹೇಳತೊಡಗಿದ-

"ಅವಳ ನಂತರದ ಈ ಜೀವನ ನನಗ ತುಂಬ ಭಾರವೆನ್ನಿಸತೊಡಗಿದೆ. ಈ ಕಷ್ಟ ಸಹಿಸಲು ಆಗ ನನ್ನ ಜೊತೆಗೆ ಅವಳೂ ಇದ್ದಳು. ನಾನು ಸಹಿಸಿಕೊಳ್ಳುತ್ತಿದ್ದೆ... ಬರುಬರುತ್ತ ಅವಳಿಗೆ ಸಹಿಸಿಕೊಳ್ಳಲಾಗಲಿಲ್ಲ.... ಅವಳಿಲ್ಲದ ಈ ಜೀವನ.... [illegible] ಕಮುಕಿನ್ನಿಸುತ್ತದೆ.... ಏನೂ ತಿಳಿಯುತ್ತಿಲ್ಲ..."

ಚಹಾ ಕುಡಿದು ನಾವು ಕೆಲವು ಕ್ಷಣ ಸುಮ್ಮನೆ ಕುಳಿತಿದ್ದೆವು. ಕೊನೆಗೆ ಭಾರವಾದ ಮನಸ್ಸಿನೊಂದಿಗೆ ಅಲ್ಲಿಂದ ಹೊರಟು ಬಂದೆ. ಹೊರಡುವಾಗ ಚಮನ್ ನನ್ನ ವಿಳಾಸ ಕೇಳಿ ಬರೆದುಕೊಂಡಿದ್ದ ಹಾಗೂ ನನಗೆ ಆಗಾಗ ಬರಲೂ ಕೂಡ ಹೇಳಿದ್ದ.

ಆ ನಂತರ ಅದೆಷ್ಟೋ ದಿನಗಳು ಕಳೆದು ಹೋದವು. ಒಂದು ದಿನ ಚಮನ್ ನನ್ನನ್ನು ಕಾಣಲು ಆಫೀಸಿನಲ್ಲಿ ಬಂದ. ಏನಾದರೂ ತೊಂದರೆಯಲ್ಲಿರಬಹುದೆಂದು ಯೋಚಿಸಿದ್ದೆ. ಆದರೆ ಆತ ತನ್ನ ಯಾವ ತೊಂದರೆಯ ಬಗ್ಗೆಯೂ ಮಾತನಾಡಲಿಲ್ಲ. ನಗು-ನಗುತ್ತಲೇ ಮಾತನಾಡಿದ ಹಾಗೂ ಚಹಾ ಕುಡಿದು ಹೊರಟುಹೋದ.

ಮೂರು ನಾಲ್ಕು ದಿನಗಳ ನಂತರ ನನ್ನ ಆಫೀಸಿನ ಓರ್ವ ಸಹೋದ್ಯೋಗಿ ತನ್ನ ಕೈಯಲ್ಲಿ ಕಟ್ಟಿದ್ದ ವಾಚ್ ತೋರಿಸುತ್ತ "ಹೇಗಿದೆ?" ಎಂದ. ನಾನು ಅದನ್ನು ದಿಟ್ಟಿಸಿ ನೋಡುತ್ತ, "ವಾಚ್ ತುಂಬ ಚೆನ್ನಾಗಿದೆ" ಎಂದೆ. ಮತ್ತೆ ಆತ "ತುಂಬ ಕಡಿಮೆ ಬೆಲೆಯಲ್ಲಿಯೇ ಸಿಕ್ಕಿತು. ಸ್ಮಗಲ್ಡ್ ಮಾಲು" ಎಂದಾಗ ಪಕ್ಕದಲ್ಲಿದ್ದ ಗೆಳೆಯ "ಮಿತ್ರ, ನನಗೂ ಒಂದು ಇಂಥದೇ ವಾಚ್ ಕೊಡಿಸಲ್ಲ" ಎಂದ. ಅದಕ್ಕವನು. "ಭರವಸೆ ಕೊಡಲಾರೆ. ಆ ಮನುಷ್ಯ ಮತ್ತೆ ಇತ್ತ ಬಂದರೆ ಕೇಳಿ ನೋಡುವೆ..." ಎಂದ.

ಈ ಮಾತುಗಳನ್ನು ಕೇಳುತ್ತಿರುವಂತೆಯೇ ನನಗರಿಯದೆಯೇ ಅದೇಕೋ ನನ್ನ ಮನಸ್ಸು ಚಮನ್ ಬಗ್ಗೆ ಯೋಚಿಸತೊಡಗಿತು..... ಬಹುಶಃ ಅವನೇ ಈ ಸ್ಮಗಲ್ಡ್ ವಾಚ್ ತಂದುಕೊಟ್ಟಿರಬೇಕು... ನಾನು ಸುಮ್ಮನಿದ್ದೆ. ಒಂದು ವಾರದ ನಂತರ ಮತ್ತೆ ಚಮನ್ ಆಫೀಸಿಗೆ ಬಂದ. ಆದರೆ ಸ್ಮಗಲ್ಡ್ ವಾಚ್‌ಗಳ ಬಗ್ಗೆ ಕೇಳಬೇಕೆನ್ನುವ ಇಚ್ಛೆ ನನ್ನಲ್ಲಿದ್ದರೂ ಕೂಡ ನನಗೆ ಕೇಳಲಾಗಲಿಲ್ಲ. ಅಂದು ಕೂಡ ನನಗೆ ಮನೆಗೆ ಬರಲು ಆಮಂತ್ರಣ ನೀಡಿದ. ಆಗ ನನಗನ್ನಿಸಿತು. ಚಮನ್ ಜೀವನದಲ್ಲಿ ಬದಲಾವಣೆ ಆಗುತ್ತಲಿದೆ ಎಂದು.

ಅವನ ಜೀವನದಲ್ಲಿ ಸಂತಸದ ಆಗಮನವಾಗತೊಡಗಿದೆ-ಯಾರೇ ಆಗಲಿ ಯಾವುದೋ ಒಂದು ಯಾತನೆಯನ್ನು ಎಲ್ಲಿಯವರೆಗೂ ಹಚ್ಚಿಕೊಂಡಿರಲು ಸಾಧ್ಯ ?

ಬರುಬರುತ್ತ ಈ ಗಡಿಯಾರಗಳ ವ್ಯಾಪಾರ ನಮ್ಮ ಆಫೀಸಿನಲ್ಲಿ ವೃದ್ಧಿಯಾಗತೊಡಗಿತು. ಯಾವನೋ ಓರ್ವ ಕಸ್ಟಮ್ ಮನುಷ್ಯನ ಜೊತೆ ಕೂಡಿಕೊಂಡು ಈ ಕೆಲಸ ಮಾಡುತ್ತಿದ್ದಾನೆಂಬ ಸುದ್ದಿ ಅಲ್ಲಿ ಜನಜನಿತವಾಗತೊಡಗಿತು. ಕಸ್ಟಮ್ ಅವರಿಂದ ಈ ವಾಚ್‌ಗಳು ತನಗೆ ಸಿಕ್ಕ ಕೂಡಲೇ ಇಲ್ಲಿ ತಂದು ಮಾರುತ್ತಾನೆಂಬ ಸುದ್ದಿಯೂ ಹರಡಲಾರಂಭಿಸಿತು.

ಚಮನ್ ಕೆಲವು ಸಲ ತಿಂಗಳು ಕಳೆದ ನಂತರ ಆಫೀಸಿಗೆ ಬರುತ್ತಿದ್ದ. ಕೆಲವೊಮ್ಮೆ ಹದಿನೈದು ದಿನಗಳಲ್ಲಿಯೇ ಬರುವುದು ಕೂಡ ವಾಡಿಕೆಯಾಗಿತ್ತು. ಅಂತೂ ತನಗೆ ಮಾಲು ದೊರೆತ ಕೂಡಲೇ ಆಫೀಸಿಗೆ ಬರುವ ರೂಢಿ ಅವನದಾಗಿತ್ತು. ಈ ಕೆಲಸ ಮಾಡುವವನು ಚಮನ್ ಅಲ್ಲದೆ ಬೇರೆ ಇನ್ನಾರೂ ಅಲ್ಲವೆಂಬುದು ಈಗೀಗ ನನಗೆ ಖಚಿತವಾಗತೊಡಗಿತ್ತು. ಒಂದೆರಡು ಸಲ ಅವನು ಆಫೀಸಿಗೆ ಬಂದು ಹೋದುದನ್ನು ನಾನು ಕೂಡ ನೋಡಿದ್ದೆ. ಆದರೆ ಆಗ ಆತ ನನ್ನಲ್ಲಿಗೆ ಬರಲಿಲ್ಲ.

ಅವನು ಹೀಗೆ ಇಂಥ ಕೆಲಸಕ್ಕೆ ಇಳಿದುದು ನನಗೆ ಅಷ್ಟು ಚೆನ್ನಾಗಿ ತೋರಲಿಲ್ಲ. ಆದರೆ ನಾನೇನು ಮಾಡಬಲ್ಲೆ? ನನಗೆ ಯಾವಾಗಾದರೂ ನೆನಪಾಗುವುದು ಆ ದಿನದ ದೃಶ್ಯ-ಚಮನ್ ಚಹಾ ಮಾಡತೊಡಗಿದ್ದ ಹಾಗೂ ಗೋಡೆಯ ಮೇಲೆ ತೂಗು ಹಾಕಿರುವ, ನಿಂತಿರುವ ಗಡಿಯಾರ. ಈಗ ಬಹುಶಃ ಚಮನ್ ಆ ಗಡಿಯಾರವನ್ನು ಮತ್ತೆ ಚಾಲು ಮಾಡಿರಬೇಕೆಂದೆನ್ನಿಸುತ್ತದೆ. ಚಾಲು ಆಗಿರುವ ಗಡಿಯಾರ ತನ್ನ ಟಿಕ್...... ಟಿಕ್...... ಸಪ್ಪಳ ಆರಂಭಿಸಿರಬೇಕು..... ಈಗ ಚಮನ್ ಮತ್ತೆ ಮನೆಗೆ ಆಮಂತ್ರಿಸಿದರೆ........ ನನಗೆ ಹೋಗುವ ಧೈರ್ಯವಿಲ್ಲವೆಂದೆನಿಸುತ್ತದೆ..........

ನಾಲ್ಕಾರು ದಿನಗಳ ನಂತರ ತುಂಬ ಅವಸರದಿಂದ ನನ್ನ ಕೋಣೆಯೊಳಗೆ ಬಂದ. ಹಲವು ರೀತಿಯ ಸ್ಕೀಮ್‌ಗಳ ಬಗ್ಗೆ ಹೇಳುತ್ತ- "ರಿಕ್ಷಾ ತೆಗೆದುಕೊಳ್ಳಬೇಕೆಂದು ಯೋಚಿಸಿರುವೆ. ಒಂದೆರಡು ರಿಕ್ಷಾ ಬಾಡಿಗೆಗಾಗಿ ಇಟ್ಟರೆ ದಿನವೂ ಖರ್ಚು ಹೋಗಿ ಸಾಕಷ್ಟು ಸಂಪಾದನೆ ಆಗಬಹುದೆಂದುಕೊಂಡಿರುವೆ. ಈಗ ಇವೆಲ್ಲ ಕಂತುಗಳಲ್ಲಿ ಸಿಗುತ್ತಲಿವೆ..." ಎಂದ. ಈ ಎಲ್ಲ ಮಾತುಗಳಲ್ಲಿ ನಾನು ಕೂಡ 'ಆಗಬಹುದು' ಎಂದು ದನಿ ಸೇರಿಸಿದೆ ಅಷ್ಟೆ.

ಅವನ ಮುಖದ ಮೇಲಿನ ಕಳೆ ನೋಡಿ ಇವನಿನ್ನು ಇಲ್ಲಿಯ ಜೀವನದ ಜೊತೆ ಓಡಲು ಯೋಗ್ಯವಾಗುತ್ತಿದ್ದಾನೆಂದೆನ್ನಿಸಿತು. ಚಮನ್ ದಿಲ್ಲಿಯ ಇನ್ನುಳಿದ ಜನರಂತೆ ಆಗಲು ಹೊರಟಿರುವುದು ಸ್ಪಷ್ಟವಾಗಿ ನನಗಂದು ತೋರಿತು. ನಾಳೆಯ ಬೆಳಗು ಅಥವಾ ನಾಡದ್ದಿನ ಬೆಳಗು, ಅದೂ ಆಗದಿದ್ದರೆ ಅದರ ನಂತರದ ದಿನಗಳಲ್ಲಿ ಬರುವ ಬೆಳಗು ಜೀವನದಲ್ಲಿ ಸಂಪೂರ್ಣ ಬದಲಾವಣೆ ತರಲಿದೆ ಹಾಗೂ ತನ್ನ ಬಡತನ, ಅಭಾವಗಳನ್ನು ನೀಗಲಿದೆ ಎಂದು ಅವನಿಗೆ ಅನ್ನಿಸತೊಡಗಿತ್ತು. ಬಹುಶಃ ಆ ದಿನ ದೂರವಿರಲಾರದು....

ಈ ಯೋಚನೆಯಲ್ಲಿರುವಾಗಲೇ ಚಾಂದನೀ ಚೌಕ್‌ದಲ್ಲಿಯ ನಿರಂತರ ಚಲಿಸುವ ಜನಜಂಗುಳಿ ನನ್ನ ಕಣ್ಮುಂದೆ ಸುಳಿದಂತಾಗುತ್ತದೆ... ನಗುವ..... ಉಲ್ಲಾಸದ ಜೀವನ ಕಾಣಿಸಿಕೊಳ್ಳುತ್ತದೆ.....

........ಮತ್ತೆ ಅದರೊಂದಿಗೆ ಒಂದು ಗೋಡೆ, ಅದರ ಮೇಲೆ ತೂಗು ಹಾಕಿರುವ ವಾಲ್ ಕ್ಲಾಕ್ ಕಾಣಿಸಿಕೊಳ್ಳುತ್ತದೆ. ಅದರಲ್ಲಿ ಸವಾ ಎಂಟು ಗಂಟೆ ಆಗಿದೆ ಹಾಗೂ ಅದು ಸತವಂತಿ ಸತ್ತ ಕ್ಷಣದಿಂದಲೇ ನಿಂತುಹೋಗಿದೆ. ಗತಿಹೀನವಾಗಿದೆ. ಈಗ ನನಗೆ ಎಲ್ಲ ಗಡಿಯಾರಗಳೂ ನಿಂತು ಹೋಗಿವೆ-ಎನ್ನಿಸುತ್ತಲಿದೆ. ಅಷ್ಟೇ ಅಲ್ಲ. ಎಲ್ಲ ಗಡಿಯಾರಗಳಲ್ಲಿ ಸವಾ ಎಂಟು ಗಂಟೆ ಆಗಿದೆ ಎಂದೆನ್ನಿಸುತ್ತಲಿದೆ. ಯಾವುದೇ ಗಡಿಯಾರ ಅದು ಎಷ್ಟೇ ವೇಗದಿಂದ ಚಲಿಸಿದರೂ ಅದರ ಮುಳ್ಳುಗಳು ಸವಾ ಎಂಟರ ಮೇಲೆ ಬಂದ ಕೂಡಲೇ ಅದರ ಟಿಕ್..... ಟಿಕ್..... ಬಡಿತ ನಿಂತುಹೋಗುತ್ತದೆ...... ಮತ್ತೆ ಎಲ್ಲವೂ ಸ್ಥಿರಗೊಳ್ಳುತ್ತದೆ. ಪ್ರತಿಯೊಂದು ಮನೆಯ ಗೋಡೆಯ ಮೇಲೆ ಚಲನವಿಲ್ಲದ, ನಿಂತು ಹೋದ ಈ ಗಡಿಯಾರಗಳು ಕೇವಲ ತೂಗಾಡುತ್ತಲಿರುತ್ತವೆ ಹಾಗೂ ಉಳಿದುದೆಲ್ಲ ಕಣ್ಣಿಂದ ಮರೆಯಾಗುತ್ತದೆ.

ಅಂದು ಯಾವ ಕಾರಣಕ್ಕಾಗಿ ಸೂಟಿಯಿತ್ತೋ ಗೊತ್ತಿಲ್ಲ. ಮನೆಯಲ್ಲಿಯೇ ಇದ್ದೆ. ಬಾಗಿಲ

ಬಡಿದ ಸಪ್ಪಳವಾಯಿತು. ಹೋಗಿ ಬಾಗಿಲು ತೆರೆದಾಗ ಓರ್ವ ಸಿಪಾಯಿ ಸಾದಾ ಉಡುಪಿನಲ್ಲಿದ್ದ. ಪೋಲೀಸ್‌ಯೆಂದು ಗುರುತಿಸಲು ಆತನ ತಲೆಯ ಮೇಲೆ ಪೋಲೀಸ್ ಟೊಪ್ಪಿಗೆ ಮಾತ್ರ ಇತ್ತು. ಒಂದು ಕ್ಷಣ ಅಚ್ಚರಿಯಾಯಿತು. ಆತನೇ ಹೇಳತೊಡಗಿದ- "ಚಮನ್‌ಲಾಲ ಎನ್ನುವಾತ ನನ್ನನ್ನು ತಮ್ಮ ಹತ್ತಿರ ಕಳಿಸಿದ್ದಾನೆ. ಆತನನ್ನು ನಿನ್ನೆ ರಾತ್ರಿ ಬಂಧಿಸಲಾಗಿದೆ ಹಾಗೂ ಪಾರ್ಲಿಮೆಂಟ್ ಪೋಲೀಸ್ ಠಾಣೆಯಲ್ಲಿಡಲಾಗಿದೆ. ತಾವು ಜಮಾನತ್ ನೀಡಿ ಬಿಡಿಸಿಕೊಳ್ಳಬೇಕೆಂಬುದು ಆತನ ಇಚ್ಛೆಯಾಗಿದೆ" ಎಂದು.

ಚಮನ್ ಸ್ಮಗಲ್ಡ್ ವಾಚ್ ಮಾರಾಟದಿಂದಾಗಿ ಸಿಕ್ಕುಬಿದ್ದಿರಬೇಕೆಂಬುದು ನನಗೆ ಗೊತ್ತಿದ್ದರೂ ಕೂಡ- "ಯಾವ ಅಪರಾಧಕ್ಕಾಗಿ ಆತನನ್ನು ಬಂಧಿಸಲಾಗಿದೆ?" ಎಂದು ಕೇಳಿದೆ. ನಾನು ಈ ಮೊದಲು ಅಂದುಕೊಂಡದ್ದೇ ನಿಜವಾಗಿತ್ತು. ಪೋಲೀಸ್ - "ಗಡಿಯಾರದ ಮಾರಾಟದಲ್ಲಿ ಸಿಕ್ಕುಬಿದ್ದಿದ್ದಾನೆ" ಎಂದೇ ಹೇಳಿದ.

ಪ್ರಯತ್ನಪಟ್ಟು ಚಮನ್‌ನನ್ನು ಬಿಡಿಸಿಕೊಂಡು ಬಂದಿದ್ದೆ. ನಂತರ ಬಂಧನಕ್ಕೆ ಕಾರಣವಾದ ಎಲ್ಲ ಕಥೆ ಅರಿತುಕೊಂಡಿದ್ದೆ. ಬಹಳಷ್ಟು ವಾಚ್ ಮಾರಾಟ ಮಾಡಿದ್ದರಿಂದ ಸುದ್ದಿ ಹಬ್ಬಿ ಯಾವನೋ ಒಬ್ಬ ಆಗಲಾರದವನು ಪೋಲೀಸರಿಗೆ ಮಾಹಿತಿ ನೀಡಿದ್ದ. ಹೀಗಾಗಿ ಚಮನ್ ಬಂಧನಕ್ಕೊಳಗಾಗಿದ್ದ. ಕೊನೆಗೆ ಮ್ಯಾಜಿಸ್ಟ್ರೇಟರ ಎದುರು ಕೇಸ್ ಬಂದಾಗ ಚಮನ್ ತನ್ನ ಹೇಳಿಕೆ ನೀಡಿದ- "ಗೌರವಾನ್ವಿತರೇ, ನನ್ನ ಗಡಿಯಾರದ ಅಂಗಡಿ ಚಾಂದನೀ ಚೌಕ್‌ದಲ್ಲಿದೆ. ನಾನು ಸ್ವತಃ ಗಡಿಯಾರಗಳ ಡೀಲರ್ ಇದ್ದೇನೆ. ಆದರೆ ಅಂಗಡಿಯಲ್ಲಿ ವ್ಯಾಪಾರವಾಗುತ್ತಿರಲಿಲ್ಲ. ಹೀಗಾಗಿ ನಾನೇ ಸ್ವತಃ ಆಫೀಸುಗಳಿಗೆ ಹೋಗಿ ಗಡಿಯಾರಗಳ ಮಾರಾಟ ಮಾಡುತ್ತೇನೆ. ನಾನು ಮಾರಿರುವ ಎಲ್ಲ ಗಡಿಯಾರಗಳೂ ನನ್ನ ಅಂಗಡಿಯಿಂದ ತೆಗೆದುಕೊಂಡು ಹೋದವುಗಳೇ ಆಗಿವೆ. ಅವುಗಳನ್ನು ನಾನು ಖರೀದಿಸಿದ ರಸೀದಿ ಹಾಗೂ ಕ್ಯಾಷ್‌ಮೆಮೋ ನನ್ನಲ್ಲಿವೆ. ನಾನು ಮಾರಿರುವ ಯಾವ ಗಡಿಯಾರಗಳೂ ಕಳ್ಳಸಾಗಾಣಿಕೆಯಿಂದಾಗಲೀ, ಕಸ್ಟಮ್‌ದಿಂದಲಾಗಲೀ ಬಂದವುಗಳಲ್ಲ. ಸೇಲ್ಸ್ ಟ್ಯಾಕ್ಸ್‌ಗೆ ಸಂಬಂಧಿಸಿದ ಎಲ್ಲ ಕಾಗದ ಪತ್ರಗಳಲ್ಲಿ ನಾನು ಮಾರಿರುವ ಗಡಿಯಾರಗಳ ವಿವರವಿದೆ. ಮುಂಬೈಯಿಂದ ನಾನು ಯಾವ ಫರ್ಮ್‌ನಿಂದ ಈ ಗಡಿಯಾರಗಳನ್ನು ತರಿಸುತ್ತಿರುವೆನೋ ಆ ಫರ್ಮಿನ ಬಿಲ್ಲುಗಳನ್ನು ಕೋರ್ಟಿನ ಮುಂದೆ ಹಾಜರುಪಡಿಸುತ್ತಿದ್ದೇನೆ- ನಾನು ಯಾವುದೇ ರೀತಿಯ ಮೋಸ, ಅಪ್ರಾಮಾಣಿಕತೆ ಗೈದಿಲ್ಲ. ಆದರೆ ಈ ಗಡಿಯಾರಗಳನ್ನು ಮಾರುವ ರೀತಿಯನ್ನು ನಾನು ಅನಿವಾರ್ಯವಾಗಿ ಬದಲಿಸಬೇಕಾಯಿತು... ಸ್ಮಗಲ್ಡ್ ಗೂಡ್ಸ್ ಎಂದ ಕೂಡಲೇ ಮಾರಾಟವಾಗುತ್ತವೆ........ ಎಂದು ತಿಳಿದ ನಾನು ನನ್ನ ಗಡಿಯಾರಗಳ ಬಗ್ಗೆಯೂ ಹಾಗೆ ಹೇಳಿದೆ...."

ಚಮನ್‌ನ ಹೇಳಿಕೆ ಆಲಿಸಿದ ಮ್ಯಾಜಿಸ್ಟ್ರೇಟರು ಆತ ಸಲ್ಲಿಸಿದ ಕಾಗದ-ಪತ್ರಗಳನ್ನು ಪರಿಶೀಲಿಸಿ ನೋಡಿ, ಆತನನ್ನು ನಿರಪರಾಧಿಯೆಂದು ಸಾರಿ ಬಂಧನದಿಂದ ಮುಕ್ತಗೊಳಿಸಿದರು....

ಕೋರ್ಟಿನಿಂದ ಬಿಡುಗಡೆ ಹೊಂದಿ ಹೊರ ಬಂದಾಗ ಚಮನ್ ಅದೇಕೋ ಅಷ್ಟೊಂದು ಸಂತುಷ್ಟನಾಗಿ ಕಾಣಲಿಲ್ಲ. ತನ್ನಿಂದಾಗಿ ನನಗೆ ತೊಂದರೆಯಾಯಿತೆಂದು ಮತ್ತೆ ಮತ್ತೆ ಹೇಳುತ್ತ ಕ್ಷಮೆ ಕೇಳಿದ ಹಾಗೂ ತನ್ನೊಂದಿಗೆ ಮನೆಗೆ ಬಂದು ಚಹಾ ಕುಡಿದು ಹೋಗಬೇಕೆಂದು ಒತ್ತಾಯಿಸಿದ.

ಮುಕ್ಕಾಂ. : ಚಾಂದನೀ ಚೌಕ್

ಲಾಲಕಿಲ್ಲೆಯಿಂದ ಪತಹಪುರಿವರೆಗೆ ಹೋಗುವಷ್ಟು ದೂರದ ಹಾದಿ. ಟೌನ್‌ಹಾಲ್‌ದ ಹತ್ತಿರದ ಅದೇ ಸಂದಿ. ಅದೇ ಕೋಣೆ, ಕಿಸೆಯಿಂದ ಕೀಲಿಕೈ ತೆಗೆದು ಚಮನ್ ಕೀಲಿ ತೆರೆದು ಒಳಗೆ ಹೋಗಿ ಲೈಟ್ ಹಚ್ಚಿದ ಹಾಗೂ ಚಹಾ ಮಾಡುವಲ್ಲಿ ನಿರತನಾದ.

ಗೋಡೆಯ ಮೇಲಿರುವ ವಾಲ್-ಕ್ಲಾಕ್ ಈಗ ನಡೆಯುತ್ತಿರಬಹುದೆಂದು ನಾನು ಭಾವಿಸಿದ್ದೆ.....

...... ಆದರೆ ಅದು ಅದೇ ರೀತಿ ಗತಿಹೀನವಾಗಿದೆ....

........ ಈಗಲೂ ಅದರಲ್ಲಿ ಸವಾ ಎಂಟು ಗಂಟೆಯಾಗಿದೆ.........

* * *

# ಶಿಬಾ ಅವನತಿಯ ಹಾದಿಯಲ್ಲಿ

ಬಾಂಗ್ಲಾ ಮೂಲ : **'ಅನಾಮಿಕ'**
ಅನು : **ಎಂ. ಎಸ್. ವ್ಯಾಸರಾವ್**

ಕೂತಿದ್ದಾನೆ ಸಾಲೋಮನ್ ಮಂಡಿಗೆ ತಲೆಯೂರಿ
ತಲೆಯೊಳಗೆ ಚಿಂತೆ ಒಂದೇ : ಆಗಬೇಕೆ ಹೀಗೆ
ಶೀಬಾದ ಅವನತಿ!
ಕವಿಯಿತ್ರೆ ಕರಾಳ ಛಾಯೆ;

ಎರಗಿದ ಹದ್ದುಗಳು ಮತ್ತೆರಗಿ
ಉಸಿರುಗಟ್ಟಿಸಿದ ದಾಳಿ
ಕೊನೆ ಹನಿಯ ರಕ್ತವನ್ನೂ ಚಪ್ಪರಿಸಿ ನುಂಗಿ
ಉಸಿರೆಳೆದ ಮರುಭೂಮಿ

ಹೂವಿಲ್ಲ, ಹೊದರಿಲ್ಲ; ಜಾಲಿನೆರಳೂ ಇಲ್ಲ
ರೋದಿಸಿದೆ ಗಾಳಿ ಬಿಡದ ಗುಡುಗು ಮಳೆಗೆ
ತೆಪ್ಪಗಿವೆ ಹಕ್ಕಿಗಳು ಕೊಕ್ಕಡಗಿಸಿ ರೆಕ್ಕೆಮರೆಗೆ
ಇನ್ನೆಲ್ಲಿ ಗುಟುಕು ನೀರು? ಮಿರಮಿರಿವ ಮರೀಚಿಕೆ

೨

ಕೂತಿದ್ದಾನೆ ಸಾಲೋಮನ್ ಮಂಡಿಗೆ ತಲೆಯೂರಿ
ಎದೆಯೋ ಕಾದ ಕಲ್ಲುಬಂಡೆ, ಒಳಗೆ ವಿಷಾದ
ತಲೆ ಹಂಡೆಯೊಳಗೆ ಕುದಿಕುದಿವ ಹುಚ್ಚು ತುರಿಕೆ
ಚಾಣಾಕ್ಷತನ ತುದಿಗಾಲ ಜಿಂಕೆ ಹಾರಲೆಳಸುತ್ತಿದೆ

ಹೇಳು ಪ್ರೀತಿಯೆ ನೀನೇನು ಹಟಾತ್ತನೆರಗಿ ಬಂದ
ಬೆಂಕಿ ಸಲಗವೆ?
ಧುತ್ತೆಂದು ಹಾರಿಬಂದ ಆಸೆಯೆ

ನೀನು ದುರ್ಗಂಧವೆ?
ಇದೇ ಬದುಕಿನ ಬಗೆ?
ಇನ್ನೆಲ್ಲಿ ಶಿಬಾ? ಈಗ ನಿರ್ನಾಮ!
ದಾಳಿಗರ ಜಾಡಿನಲ್ಲಿ ಉಳಿದಿವೆ ಭಗ್ನಾವಶೇಷ

೩

ಕೂತಿದ್ದಾನೆ ಸಾಲೋಮನ್ ಮಂಡಿಗೆ ತಲೆಯೂರಿ
ತನ್ನಷ್ಟಕ್ಕೆ ತಾನೇ ಕಾಯುತ್ತಾ
ಬರುವನೆ ಅದೃಷ್ಟದೇವತೆಯ ದೂತ
ಕಾಲದ ಬಟ್ಟಲನ್ನು ತುಂಬಲು ದ್ರಾಕ್ಷಾರಸದಿಂದ!

* * *

# ಮರೆತುಬಿಡು ಅವಳನ್ನು

ಬಾಂಗ್ಲಾ ಮೂಲ : ವಿನ್ ಯೂಥೊ
ಅನು : ಎಂ. ಎನ್. ವ್ಯಾಸರಾವ್

ಮರೆತು ಬಿಡು ಅವಳನ್ನು ಮರೆತುಹೋದ ಹೂವಿನಂತೆ
ಮುಂಜಾನೆ ಹೊಂಗಿರಣ ಹೂದಳದಿಂದ
ಗಾಳಿ ಧೂಬಿಟ್ಟು ಕಂಪು ಹಾರಿಸಿದ ಹಾಗೆ;
ಮರೆತುಬಿಡು ಅವಳನ್ನು

ವಸಂತ ಕಾಲದ ತಂಗಾಳಿಯ ಕನಸಿನಂತೆ
ಕನಸಲ್ಲಿ ಮೊಳಗಿ ಕರಗುವ ಘಂಟೆದನಿಯಂತೆ
ಮರೆತುಬಿಡು ಅವಳನ್ನು

ಆಲಿಸು ಮಿಡತೆಗಳು ಹಾಡುತ್ತಿರುವ ಸೊಗಸನ್ನು
ಗಮನಿಸು ಗರಿಕೆಹುಲ್ಲು ಬೆಳೆವ ರೀತಿಯನ್ನು
ಮರೆತುಬಿಡು ಅವಳನ್ನು

ಮುಂದೆಂದೂ ನೆನೆಯಲಾರಳು ನಿನ್ನನ್ನು
ಅವಳಲ್ಲಿ ಕಿಂಚಿತ್ತೂ ಉಳಿದಿಲ್ಲ ನಿನ್ನ ನೆನಪು
ಮರೆತುಬಿಡು ಅವಳನ್ನು

ಯೌವನ ಎಂತಹ ಆತ್ಮೀಯ ಗೆಳೆಯ!
ರಾತ್ರಿ ಕಳೆಯುವಷ್ಟರಲ್ಲಿ ಮುಪ್ಪು ಕವಿಸಿಬಿಟ್ಟ!
ಮರೆತುಬಿಡು ಅವಳನ್ನು

ಕೇಳಿದರೆ ಯಾರಾದರೂ ಅವಳ ಬಗ್ಗೆ
ನಕ್ಕುಬಿಡು, ಅದಕ್ಕೇಕೆ ಲಜ್ಜೆ
ಇದ್ದಷ್ಟು ಹೊತ್ತು ಅಂಗಳದಲ್ಲಿ ಬಿಸಿಲು
ಆಮೇಲೆ? ಹೊಸ್ತಿಲವೋ ಕಾದಿರುವ ಇರುಳು
ಮರೆತುಬಿಡು ಅವಳನ್ನು; ಮರೆತುಹೋದ ಹೂವಿನಂತೆ

* * *

# ಸಮಾಜಮುಖಿ ತೆಲುಗು ಕವಿ
# 'ಶ್ರೀ ಶ್ರೀ' ಅವರ 'ಮಹಾಪ್ರಸ್ಥಾನ'

ಪ್ರೊ॥ ಕೆ. ರಾಜೇಶ್ವರಿ

"ಶಾಸನಗಳಿಗಿಂತ ಬಲಿಷ್ಠವಾದದ್ದು, ಉದಾತ್ತವಾದದ್ದು, ಅನುಲ್ಲಂಘನೀಯವಾದದ್ದು ಕವಿವಾಕ್ಯ. ಆದ್ದರಿಂದ ಕವಿ ಸಂಘಕ್ಕೆ ಮಾರ್ಗದರ್ಶಕನಾಗಬೇಕು. ಸಮಾಜವನ್ನು ಮುನ್ನಡೆಸುವುದೇ ವಿಪ್ಲವ ಪಂಥ, ಅಭ್ಯುದಯ ರೀತಿ."

೧೯೪೬ರಲ್ಲೇ ಅಭ್ಯುದಯ ಕಾವ್ಯದ ಆಶಯ, ಕವಿಯ ಜವಾಬ್ದಾರಿಗಳನ್ನು ಈ ಮಾತುಗಳ ಮೂಲಕ ಸ್ಪಷ್ಟಪಡಿಸಿದ ಶ್ರೀರಂಗಂ ಶ್ರೀನಿವಾಸರಾವ್ ಅವರ ಕಾವ್ಯನಾಮವೇ 'ಶ್ರೀ ಶ್ರೀ' ('ಸಿರಿ ಸಿರಿಮುವ್ವ'). ಇವರ ಸ್ವಂತ ಊರು ವಿಶಾಖಪಟ್ಟಣಂ (೧೯೧೦-೧೯೮೩). ಬದುಕಿನ ಬಹುತೇಕ ಕಾಲವನ್ನು ಮದರಾಸಿನಲ್ಲಿ ಕಳೆದು ತೆಲುಗಿನಲ್ಲಿ "ಅಭ್ಯುದಯ ಕವಿತ್ವ ಸಂಸ್ಥಾಪನಾಚಾರ್ಯ" ಎಂದೇ ಪ್ರಸಿದ್ಧರಾದರು.

ಬೂರ್ಜ್ವಾಗಳ ಶವಸಂಸ್ಕೃತಿಯನ್ನು ವಿರೋಧಿಸಿ, ಶ್ರಮಜೀವಿಗಳ ಸಜೀವ ಸಂಸ್ಕೃತಿಗೆ ಪ್ರಾಧಾನ್ಯ ಕೊಟ್ಟ ಶ್ರೀ ಶ್ರೀ ಅವರ ಕಾವ್ಯ ಓದುಗರನ್ನು ಆವರಿಸಿಕೊಳ್ಳುವುದೇ ಅವುಗಳ ವಸ್ತು ಹಾಗೂ ಹರಿತವಾದ ಖಡ್ಗದ ಝಳಪಿನಂತಿರುವ ಶಕ್ತ ಅಭಿವ್ಯಕ್ತಿಯಿಂದಾಗಿ. ಇವರ ಕಾವ್ಯದಲ್ಲಿನ ಸಾರ್ವಕಾಲಿಕ ವೈಶಿಷ್ಟ್ಯತೆಗಳು ಗಂಭೀರ ಪ್ರಭಾವವನ್ನುಂಟುಮಾಡುತ್ತವೆ. ಅವುಗಳಲ್ಲಿ ಗಮನಾರ್ಹವಾದವು :

೧. ಸ್ವಪ್ನಲೋಕದ ರಮ್ಯ ವೈಭವೀಕರಣಗಳ ನಿಶೆಯಿಂದ ಕಾವ್ಯವನ್ನು ಬಿಡುಗಡೆಗೊಳಿಸಿ ಈ ಮಣ್ಣಿನ ಕಣ್ಣಿಗೆ ಕಾಣಗೊಳಿಸಿರುವುದು.

೨. ಅತಿ ವಾಸ್ತವ ನಿರೂಪಣೆಯಿಂದಾಗಿ ಕಾವ್ಯ ಕೆಳವರ್ಗದ ಮುಖ್ಯಧ್ವನಿಯಾಗಿರುವುದು.

೩. ಐತಿಹಾಸಿಕ ಪ್ರತಿಮೆಗಳನ್ನು ಸಮಕಾಲೀನ ವಸ್ತುವಿಗೆ ಸಮೀಕರಿಸಿದ್ದರಿಂದ ಹೆಚ್ಚಾದ ಅರ್ಥವ್ಯಾಪ್ತಿ.

೪. ಜನಸಾಮಾನ್ಯರ ಬದುಕು-ಭಾಷೆಗಳು ಕಾವ್ಯದ ಆಕೃತಿ-ಆತ್ಮಗಳಾಗಿರುವುದು.

೫. ಸಾಮಾಜಿಕ ಪ್ರಜ್ಞೆಗೆ ಕವಿ ಕಟಿಬದ್ಧನಾಗಬೇಕೆಂಬ ಸಿದ್ಧಾಂತ ಗಟ್ಟಿಗೊಳಿಸಿರುವುದು.

ದಂತಗೋಪುರದಲ್ಲಿದ್ದ ಸಾಹಿತ್ಯದ ಚೌಕಟ್ಟನ್ನು ಭೇದಿಸಿ ನೇರಕ್ಕೆ ತಂದು ಹೊಸಯುಗದ ಪ್ರವರ್ತಕವೆನಿಸಿದ "ಅಭ್ಯುದಯ ಕವಿತಾಯುಗ"ವನ್ನು ತೆಲುಗಿನಲ್ಲಿ ೧೯೪೦ ರಿಂದ ಸ್ಪಷ್ಟವಾಗಿ ಗುರುತಿಸಬಹುದು. ಇದರ ಪಡಿನೆಳಲೇ ಎನಿಸಿದ "ವಿಪ್ಲವ ಸಾಹಿತಿ ಸಂಘ" (ವಿರಸಂ) ೭೦ರ ದಶಕದಲ್ಲಿ ಉದಯಿಸಿತು. ಇವೆರಡೂ ಈ ಅವಧಿಯ ಮುಖ್ಯ ಕಾವ್ಯಪಂಥಗಳು.

ಹೋರಾಟದೊಳಗಿನಿಂದಲೇ ಹುಟ್ಟಿದ್ದು "ಅಭ್ಯುದಯ ಪಂಥ". ಹೋರಾಟವನ್ನು ಆಹ್ವಾನಿಸಿದ್ದು "ವಿರಸಪಂಥ". "ದೇಶದಲ್ಲಿ ಸಮತಾವಾದ ವ್ಯವಸ್ಥೆ ಸ್ಥಾಪಿತವಾದರೆ ಅದಕ್ಕಿಂತ ಆನಂದದಾಯಕವಾದ ವಿಷಯ ಬೇರೊಂದಿಲ್ಲ" ಎಂದ ಶ್ರೀ ಶ್ರೀ ಅಭ್ಯುದಯ ಹಾಗೂ ವಿರಸಂಗಳಲ್ಲಿ ಅವಿನಾಭಾವತೆ ಗುರುತಿಸಿದವರು. ಇವೆರಡೂ ಸಮಾಜದಲ್ಲಿನ ಶೋಷಣೆ, ಅನ್ಯಾಯ, ಅಸಮಾನತೆ, ದೌರ್ಜನ್ಯಗಳ ವಿರುದ್ಧ ಪಾಂಚಜನ್ಯ ಮೊಳಗಿಸುತ್ತವೆ.

ತಾರ್ಕಿಕಗತಿ, ಭೌತಿಕ ದೃಷ್ಟಿಕೋನ (Dialectical Materialism)ಗಳನ್ನೇ ಮಾರ್ಕ್ಸಿಸ್ಟ್ ದೃಷ್ಟಿಕೋನ ಎನ್ನುವರು. ಕವಿ ಈ ದೃಷ್ಟಿಯಿಂದ ತನ್ನ ಸಮಕಾಲೀನ ಸಮಾಜದ ಆರ್ಥಿಕ, ರಾಜಕೀಯ, ಸಾಮಾಜಿಕ ವ್ಯವಸ್ಥೆಗೂ ತನಗೂ ಇರುವ ಸಂಬಂಧಗಳನ್ನು ಗ್ರಹಿಸಿ ತನ್ಮೂಲಕ ಅಭಿವ್ಯಕ್ತಿಗೊಳಿಸಿದ ವಿಷಯುಗಳು ಸಾಮಾಜಿಕ ಪ್ರಗತಿಗೆ ನೆರವಾಗುವ ಸಜೀವ ಶಬ್ದ ಚಿತ್ರವಾಗಿ ಮೌಲಿಕವೆನಿಸುವುವು. ವಾಸ್ತವವವಾಗಿ ಚಿಂತನಲೋಕವು ಜೀವಂತ ಜಗತ್ತಿನ ವ್ಯವಹಾಗಗಳನ್ನೇ ಅವಲಂಬಿಸಿದೆ ಎಂದು ನಂಬಿದ ಶ್ರೀಶ್ರೀಯವರ ಕಾವ್ಯದ ಗಟ್ಟಿನೆಲೆ ಮಾರ್ಕ್ಸ್‌ಸಿದ್ಧಾಂತವೇ ಆಗಿದೆ.

"ಬದುಕು ಮತ್ತು ಸೃಜನಕ್ರಿಯೆಗಳಲ್ಲಿ ಸಂಪ್ರದಾಯವಾದ ಹಾಗೂ ವಿಪ್ಲವ ವಾದಕ್ಕೆ ಸಂಘರ್ಷ ಸದಾ ಇರುತ್ತದೆ. ಇದರಿಂದಾಗಿ ನಿತ್ಯನೂತನ ಪ್ರಯೋಗಗಳುಂಟಾಗಿ ಸಾಹಿತ್ಯವೂ ವಿಜ್ಞಾನದಂತೆ ಪ್ರಗತಿಯಾಗುತ್ತದೆ. ಹಳೆಯ ಪ್ರಕ್ರಿಯೆಗಳನ್ನು ಹಿಡಿದು ಕುಳಿತರೆ ವಿಜ್ಞಾನವಾಗಲಿ, ಸಾಹಿತ್ಯವಾಗಲಿ, ಸ್ಥಗಿತವಾಗಿಬಿಡುತ್ತದೆ" ಶ್ರೀ ಶ್ರೀ ಅವರ ಈ ಮಾತುಗಳಲ್ಲಿ ಚಲನಶೀಲತೆಯೇ ಸಾಹಿತ್ಯದ ಚಿರಂತನ ಪ್ರಕ್ರಿಯೆ ಎಂಬುದನ್ನು ಕಾಣುತ್ತೇವೆ. ವಿಶಾಖಪಟ್ಟಣಂ-ಮದರಾಸುಗಳ ಸಮುದ್ರತೀರದಲ್ಲಿ ಗಂಟೆಗಟ್ಟಲೆ ಕಳೆಯುತ್ತಿದ್ದ ಈ ಕವಿಗೆ ಸಮುದ್ರ ಚಲನಶೀಲತೆಯ ಸಂಕೇತವಾಗಿದ್ದಿತು. ಆದ್ದರಿಂದಲೇ ಕೆಲವು ಸಾಹಿತ್ಯಾಸಕ್ತರು ಅವರ ಕಾವ್ಯದಲ್ಲಿ ಶರಧಿಯ ಚಲನಶೀಲತೆ, ರುದ್ರರಮಣೀಯತೆಗಳನ್ನು ಗುರುತಿಸಿದ್ದಾರೆ.

ಹೋರಾಟದ ಕವಿಯಾದ ಶ್ರೀಶ್ರೀಯವರ ಖಡ್ಗಸೃಷ್ಟಿಯೇ ನಲವತ್ತು ಕವಿತೆಗಳ ಗುಚ್ಛ "ಮಹಾಪ್ರಸ್ಥಾನ".

'ಮರೋ ಪ್ರಪಂಚಂ
ಮರೋ ಪ್ರಪಂಚಂ
ಮರೋ ಪ್ರಪಂಚಂ ಪಿಲಿಚಿಂದಿ !'

*(ಮತ್ತೊಂದು ಪ್ರಪಂಚ
ಮತ್ತೊಂದು ಪ್ರಪಂಚ
ಮತ್ತೊಂದು ಪ್ರಪಂಚ ಕರೆದಿದೆ !)*

ಎಂದೇ ಪ್ರಾರಂಭವಾಗುವ "ಮಹಾಪ್ರಸ್ಥಾನ" ಶೀರ್ಷಿಕಾ ಕವಿತೆಯಲ್ಲಿ ಪುನರುಕ್ತಗೊಳ್ಳುವ

ಆ 'ಮತ್ತೊಂದು ಪ್ರಪಂಚ'ವೇ ಸಮಾಜದ ಎಲ್ಲಾ ನ್ಯೂನತೆಗಳ ವಿರುದ್ಧ ಹೋರಾಡುವ "ಪ್ರಬಲ ಕ್ರಾಂತಿ ಜಗತ್ತು". 'ಕರೆದಿದೆ....' ಎಂಬ ಶಬ್ದ ಕ್ರಾಂತಿಯ ತುರ್ತು, ಜರೂರುಗಳನ್ನು ಮನಗಾಣಿಸುತ್ತದೆ.

"ಹೃದಯಾಂತರಾಳಂ ಗರ್ಜಿಸ್ತೂ
ತ್ರಾಚುಲವಲೇನೂ ರೇಚುಲವಲೇನೂ
ಧನಂಜಯುನಿಲಾ ಸಾಗಂಡಿ...."

*(ಹೃದಯಾಂತರಾಳ ಗರ್ಜಿಸುತಾ
ಹಾವುಗಳಂತೆ, ಬೇಟೆನಾಯಿಗಳಂತೆ
ಧನಂಜಯನಂತೆ ಸಾಗಿರಿ.....)*

ಕ್ರಾಂತಿಕಾರರು ಅನ್ಯಾಯದ ವಿರುದ್ಧ ಹೆಡೆಯೆತ್ತುವ ಸರ್ಪವಾಗಬೇಕು, ಶೋಷಕರನ್ನು ಸೀಳುವ ಬೇಟೆನಾಯಿಗಳಾಗಬೇಕು, ಧನಂಜಯನಂತೆ ಗುರಿಯೊಂದೇ ನಿಶ್ಚಿತವಾಗಿರಬೇಕು. ಆ ಗುರಿ "ಸಮತಾ ಸಮಾಜ". ಇಲ್ಲಿ ಹೋರಾಟದ ಸ್ವರೂಪ, ಗುರಿಗಳಿಗೆ ಬಳಸಿರುವ ಉಪಮೆಗಳು ಗಮನೀಯ. ರೋಷ, ಆಕ್ರೋಶಗಳು ಪ್ರಾಣಿಗಳಿಗೆ ಸಂಕೇತವಾಗಿವೆ. ಧನಂಜಯನ ಮೂಲಕ ಸಮತಾ ಸಮಾಜ ಸಾಧನೆ ಮಾನವಿಕವೆನಿಸಿದೆ.

"ಕನಬಡಲೇದಾ ಮರೋಪ್ರಪಂಚವು
ಅಗ್ನಿಕಿರೀಟವು ಧಗಧಗಲು
ಎರ್ರಬಾವುಟಾ ನಿಗಿನಿಗಿಲು
ಹೋಮಜ್ವಾಲಲ ಭುಗಭುಗಲು?"

*(ಕಾಣಿಸಲಿಲ್ಲವೇ ಮತ್ತೊಂದು ಪ್ರಪಂಚದ
ಅಗ್ನಿಕಿರೀಟದ ಧಗಧಗ
ಕೆಂಪುಬಾವುಟದ ನಿಗನಿಗ
ಹೋಮಜ್ವಾಲೆಯ ಭುಗಭುಗ?)*

ಕ್ರಾಂತಿ ಪ್ರಪಂಚದ ಶಕ್ತ ಸ್ವರೂಪ 'ಅಗ್ನಿಕಿರೀಟ' 'ಕೆಂಪು ಬಾವುಟ'ಗಳ ಮೂಲಕ ವ್ಯಕ್ತಗೊಂಡಿದೆ. ಸಮಾಜದ ಕಳಂಕಗಳೆಲ್ಲವನ್ನೂ ಆಹುತಿ ತೆಗೆದುಕೊಳ್ಳುವ ಹೋಮಜ್ವಾಲೆಯಾಗಿದೆ. ಧಗಧಗ, ನಿಗನಿಗ, ಭುಗಭುಗ ಈ ದ್ವಿರುಕ್ತಿಗಳು ಕ್ರಾಂತಿಯ ತೀವ್ರತೆ, ಅಖಂಡತೆಯನ್ನು ಕಟ್ಟಿಕೊಡುತ್ತವೆ.

"ಐ" (ನೇನು=ನಾನು) ಅಂದರೆ ಸಾಮಾನ್ಯ ಜನರು, ಕಾರ್ಮಿಕರು, ಕೃಷಿಕರು – ಒಟ್ಟಾರೆ ದುಡಿಯುವ ವರ್ಗವನ್ನು ಕುರಿತಾದ ಕವಿತೆ. ಶೀರ್ಷಿಕೆಯಲ್ಲಿಯೇ ಕವಿ ತಾನೂ ಇವರಲ್ಲಿ ಒಬ್ಬ ಎಂದೇ ಗುರುತಿಸಿಕೊಂಡಿರುವುದು ಮುಖ್ಯವಾಗುತ್ತದೆ.

ಶ್ರಮಿಕರೇ ನಿಜವಾದ "ವೈಷ್ಣವ್ಯಗೀತ". (ಕ್ರಾಂತಿಯನ್ನು ಸೃಷ್ಟಿಸಿದವರು). "ಅನಲ ವೇದಿಕೆಯೆದುರು ಅಸ್ಪೃಶ್ಯ ವೇದ್ಯದಂತೆ......" ಎಂಬ ವಾಕ್ಯದಲ್ಲಿ ಶ್ರಮಿಕವರ್ಗದ ಸತ್ವವನ್ನು ಅಗ್ನಿಗೆ

ಹೋಲಿಸಿ ಅನಲವೇದಿಕೆ ಎಂದು ಪ್ರತಿಮಿಸಿ ಬಂಡವಾಳಷಾಹಿ, ಭೂಮಾಲೀಕರನ್ನು 'ಅಸ್ತ್ರ' ಎಂದಿದ್ದಾರೆ. ಬೆಂಕಿಯ ಮುಂದೆ ಯಾವುದೇ ಆಯುಧಗಳೂ ಸುಟ್ಟುನಾಶವಾಗುತ್ತದೆಂಬುದೇ ಇಲ್ಲಿನ ವ್ಯಕ್ತಾಂಶ. ಜನಶಕ್ತಿಯ ಮುಂದೆ ಅಧಿಕಾರಶಾಹಿಗಳ ದೌರ್ಜನ್ಯಕ್ಕೊದಗುವ ದುಸ್ಥಿತಿಗೆ ಇದು ಕನ್ನಡಿ ಹಿಡಿದಿದೆ.

"ಜಯಭೇರಿ" ಕವಿತೆಯಲ್ಲಿ ಹೋರಾಟದಿಂದ ಉಂಟಾಗುವ ಪರಿಣಾಮವನ್ನು ಗುರುತಿಸಬಹುದಾಗಿದೆ.

"ನಿಂಗಿನುಂಡೆ ತೊಂಗಿಚೂಚೆ
ರಂಗು ರಂಗುಲ ಚುಕ್ಕಲನ್ನಿ
ರಾಲಿನೆತ್ತುರು ಕ್ರಕ್ಕುಕುಂಟೂ ವೇಲಿಪೋತಾಯಿ."

*(ಅಂಬರದಿಂದ ಇಣುಕಿ ನೋಡುವ
ಬಣ್ಣಬಣ್ಣದ ತಾರೆಗಳೆಲ್ಲ ಉದುರಿ
ರಕ್ತ ಕಕ್ಕುತ್ತಾ ಸಿಡಿದು ಹೋಗುತ್ತವೆ......)*

ಅಂಬರ, ಬಣ್ಣಬಣ್ಣದ ತಾರೆ - ಮೇಲುವರ್ಗದ ಶ್ರೀಮಂತ ಹಾಗೂ ಬೆಡಗಿನ ಬದುಕನ್ನು ಸೂಚಿಸಿ ಕ್ರಾಂತಿಯಿಂದಾಗಿ ಆ ವರ್ಗದ ವೈಭವ ರಕ್ತ ಕಕ್ಕುತ್ತಾ ಸಿಡಿದು ಹೋಗುತ್ತದೆ ಎಂಬಲ್ಲಿ ವರ್ಗಭೇದಗಳ ನಿರ್ನಾಮ ಖಚಿತ ಎಂಬ ಭರವಸೆ ಧ್ವನಿಸಿದೆ. ಈ ಸಾಲುಗಳಲ್ಲಿ ಪ್ರಸಿದ್ಧ ರಷ್ಯನ್ ಕವಿ ಮಯಕೊವ್‌ಸ್ಕಿಯ ನೇರ ಪ್ರಭಾವವನ್ನು ಗುರುತಿಸಬಹುದು.

ಹಲವರ ನವಜೀವನ ಶುಭಸಮಯಕ್ಕೆ ಕೆಲವರ ಬಲಿದಾನ ಅನಿವಾರ್ಯ. ಇದೇ "ಅಭ್ಯುದಯ" ಪದ್ಯದ ವಸ್ತು.

"ಜಗಮಂತಾ ಬಲಿವಿತರ್ದಿ
ನರಜಾತಿಕಿ ಪರಿವರ್ತನ
ನವಜೀವನ ಶುಭಸಮಯಂ! ಅಭ್ಯುದಯಂ!"

*(ಜಗವೆಲ್ಲಾ ಬಲಿ ಸಮಾರಂಭ
ನರಜಾತಿಗೆ ಬದಲಾವಣೆ
ನವಜೀವನ ಶುಭಸಮಯಂ! ಅಭ್ಯುದಯಂ!*

ಪ್ರಗತಿಯೇ ನಿಜವಾದ ಮಂಗಳ ಸಮಯ ಎಂಬುದಿಲ್ಲಿ ಸ್ಪಷ್ಟವಾಗಿದೆ.

ದೇವರ ಅವತಾರಗಳು ಹೊಸಸೃಷ್ಟಿಗೆ ನಾಂದಿಯಾದಂತೆಯೇ ಕ್ರಾಂತಿಯೂ ನವಜೀವನ ಸೃಷ್ಟಿಗೆ ಮೂಲ ಎಂದು "ಅವತಾರಂ" ಘೋಷಿಸಿದೆ; ಆಂಧ್ರದಲ್ಲಿ ಕಾರ್ತೀಕ ಪೌರ್ಣಮಿಯಂದು ಮಾಡುವ ಹಬ್ಬ "ಜ್ವಾಲಾತೋರಣಂ" ದುಷ್ಟ ಸಂಹಾರದ ಪ್ರತೀಕ. ಇಲ್ಲಿ 'ಹಿರಣ್ಯನೇತ್ರ' (ಹಿರಣ್ಯಾಕ್ಷ) ತನ್ನ ಅಧಿಕಾರಮದದಿಂದ ನಿರ್ನಾಮಗೊಂಡ; 'ವೃಕೋದರ' ಪಾಂಡವರನ್ನು ಶೋಷಿಸಿದ ದುರ್ಯೋಧನನನ್ನು ಕೊಂದವ್ವಕ್ಕೆ ಪ್ರತಿಮೆಗಳಾಗಿ ಬರುತ್ತಾರೆ.

ಅನ್ಯಾಯದ ವಿರುದ್ಧದ ಪ್ರತಿಭಟನೆ, ಹೋರಾಟಗಳು ಶೋಷಕವರ್ಗದ ಅಪಜಯ ಪುರಾಣ ಕಾಲದಿಂದಲೂ ನಡೆದಿರುವ ವೃತ್ತಾಂತ. ಇದೇ ಇಂದಿಗೂ ಕಾಣುತ್ತೇವೆ.

''ಜಾತಿ ಜಾತಿ ನಿರ್ಘಾತ ಪಾತ
ಸಂಘಾತ ಹೇತುವೈ ಕಾಲಕೇತುವೈ
ಅದಿಸಂವರ್ತ ಪ್ರಚಂಡ ತೂಫಾನು ಮೇಘಂ
ತೊಲಿಗರ್ಜಿಂಚಿತ ತೂರ್ಯ ವಿರಾಮಂ''

*(ಜಾತಿ ಜಾತಿ ನಿರ್ಘಾತ ಪಾತ*
*ಸಂಘಾತ ಹೇತುವಾಗಿ ಕಾಲಕೇತುವಾಗಿ*
*ಅದೇ ಕಲ್ಪಾಂತರದ ಪ್ರಚಂಡ ಬಿರುಗಾಳಿ ಮೇಘ*
*ಪ್ರಥಮ ಗರ್ಜನೆಯ ಕಹಳೆಯ ಧ್ವನಿ)*

ಕ್ರಾಂತಿಯ ಒಟ್ಟು ಸ್ವರೂಪ ಸಂಘಾತಹೇತು, ಕಾಲಕೇತು, ಪ್ರಚಂಡ ಬಿರುಗಾಳಿ, ಕಹಳೆಯ ಧ್ವನಿ- ಈ ಪದಪುಂಜಗಳಲ್ಲೇ ಕಣ್ಣಿಗೆ ಕಟ್ಟುತ್ತದೆ.

ಈ ಕವಿತೆ ''ಧಾರ್ಮಿಕ ಲೋಕವನ್ನು ಅದರ ಜಾತ್ಯತೀತ ತಳಹದಿಯ ನೆರವಿನಿಂದ ವಿವರಿಸಿರುವುದು ಸ್ಪಷ್ಟವಾಗಿದೆ.'' ಫ್ಯೂರ್‌ಬಾಕ್‌ನ (ಮಾರ್ಕ್ಸ್ ಇವನನ್ನು ತನ್ನ ಪೂರ್ವಾಧಿಕಾರಿ ಎಂದಿದ್ದನು) ಸಿದ್ಧಾಂತ ಇಲ್ಲಿ ಘನೀಕರಿಸಿದೆ.

''ಗ್ರಾಂಥಿಕ ಭಾಷೆ - ಗುತ್ತಿಗೆದಾರರ ಭಾಷೆ; ಆಡುಭಾಷೆ-ಜನರಭಾಷೆ, ಸಮತಾವಾದದ ವ್ಯವಸ್ಥೆಯಲ್ಲಿಯೇ ಪ್ರಜಾಪ್ರಭುತ್ವ ಪರಾಕಾಷ್ಠತೆಗೆ ತಲುಪುತ್ತದೆಂದು ಒಪ್ಪಿಕೊಂಡರೆ ಜನರ ಭಾಷೆಯಲ್ಲಿಯೇ ಪ್ರಜಾಪ್ರಭುತ್ವ ಕಾವ್ಯ ರಚನೆಯಾಗಬೇಕು '' ('ಏಕೆ ಬರೆಯಬೇಕು?') ಎಂದ ಶ್ರೀ ಶ್ರೀ ಕಾವ್ಯದಲ್ಲಿ ಅದರಲ್ಲೂ ''ಮತ್ತೊಂದು ಪ್ರಸ್ಥಾನ'' ದಲ್ಲಿಯಂತೂ ಆಡುನುಡಿ, ಗ್ರಾಮೀಣನುಡಿ ಸೊಗಡನ್ನೇ ತನಿತನಿಯಾಗಿ ಬಳಸಿದ್ದಾರೆ.

'ನವಕವಿತೆ'ಯಿಂದ ಸಮಾಜದ ಅಭ್ಯುದಯ ಸಾಧ್ಯ ಎಂದರಿತರೆ, ಕ್ರಾಂತಿಕಾರ ಸಮಾಜವನ್ನು ಅನಗತ್ಯವಾಗಿ ಅಸ್ತವ್ಯಸ್ತಗೊಳಿಸಬಾರದು (ಭಯೋತ್ಪಾದನೆ ಇತ್ಯಾದಿಗಳ ಮೂಲಕ) ಎಂದು ಸ್ಪಷ್ಟಪಡಿಸಿದ್ದಾರೆ. ಕ್ರಾಂತಿಕಾರನ ಮನೋದಾರ್ಢ್ಯದ ಅಚಲತೆ 'ಸಾಹಸಿ' ಕವಿತೆಯಲ್ಲಿ ಬಿತ್ತರಗೊಂಡಿದೆ.

ಕತ್ತಲೆ ಕವಿದ ಸಮಾಜಕ್ಕೆ ಕವಿ 'ಸೂರ್ಯ'ನಾಗುತ್ತಾನೆ. ದುರ್ಬಲರಿಗೆ ದಾರಿತೋರುವ ಅವನ ಲೇಖನಿ 'ವಜ್ರಾಯುಧ'ವಾಗುತ್ತದೆ. ಕವಿ, ಕಾವ್ಯಶಕ್ತಿಗಳ ಸತ್ವಗಳೆರಡನ್ನೂ 'ಕಲಾರವಿ' ಮೂಡಿಸಿದೆ. ಪ್ರಪಂಚದ ಪ್ರತಿಯೊಂದರಲ್ಲೂ ಕವಿತ್ವಕ್ಕೆ ಬೇಕಾದ ವಸ್ತುವಿದೆ ಎಂಬ ಅಂಶ ಸ್ಫುಟಗೊಂಡಿರುವುದೇ 'ಋಕ್ಕುಗಳು'' ಕವಿತೆಯಲ್ಲಿ .

"ಹೀನಂಗಾ ಚೂಡುಕುದೊನ್ನಿ
ಕುಕ್ಕಪಿಲ್ಲಾ, ಅಗ್ಗಿಪುಲ್ಲಾ, ಸಬ್ಬುಬಿಳ್ಳಾ
ರೊಟ್ಟೆಮುಕ್ಕಾ ಅರಟಿತೊಕ್ಕ ಬಲ್ಲಚೆಕ್ಕ.....
ಕಾದೇದಿ ಕವಿತಾನರ್ಹಂ
ಔನೌನು ಶಿಲ್ಪಮನರ್ಘಂ!"

(ಯಾವುದನ್ನೂ ಹೀನವಾಗಿ ನೋಡದಿರು
ನಾಯಿಮರಿ, ಬೆಂಕಿಕಡ್ಡಿ, ಸಾಬೂನು
ರೊಟ್ಟಿಚೂರು, ಬಾಳೆಸಿಪ್ಪೆ, ಮರದ ತುಂಡು...
ಕವಿತೆಗೆ ಯಾವುದೂ ಅಲ್ಲ ಅನರ್ಹ
ಹೌದೌದು ಶಿಲ್ಪ ಅನರ್ಘ!)

ಈ ಸಾಲುಗಳಲ್ಲಿ 'ರಾಚನಿಕವಾದ' ವನ್ನು ಸ್ಪಷ್ಟವಾಗಿ ಗುರುತಿಸಬಹುದು.

"ಕಳ್ಳುಂಟೂ ಉಂಟೆ ಚೂಸಿ
ವಾಕ್ಕುಂಟೆ ವ್ರಾಸಿ."

(ಕಣ್ಣಂತೂ ಇದ್ದರೆ ನೋಡಿ
ಮಾತಿದ್ದರೆ ಬರಿ...)

ಎನ್ನುವಲ್ಲಿ ಮಾತನ್ನು ಬರಹದ ಆಕೃತಿಗಿಳಿಸುವ ಖಚಿತ ತುಡಿತವನ್ನು ಕಾಣುತ್ತೇವೆ.

ಕ್ರಿಯಾತ್ಮಕ ಮನಸ್ಸಿಗೆ ಅನುಭವಗಳೆಲ್ಲವೂ ಹೇಗೆ ನಾಟ್ಯೀಕರಣಗೊಳ್ಳುತ್ತವೆಂಬುದ 'ಕವಿತಾ! ಓ ಕವಿತಾ!'ದಲ್ಲಿ ಸಾದರಗೊಂಡಿದೆ.

'ಉನ್ಮಾದಿ ಮನಸ್ಸಿನೀವಾಲಿಲೋ
ಘೂಕಂಕೊಕಾ ಭೇಕಂಬಾಕಾ
ಸಮ್ಮೆಕಟ್ಟಿನ ಕೂಲಿಲ
ಸಮ್ಮೆಕಟ್ಟಿನ ಕೂಲಿಲ ಭಾರ್ಯಲ ಬಿಡ್ಡಲ
ಆಕಟಿ ಚೀಕಟಿ ಬಿಚ್ಚುಲ
ಹಾಹಾಕಾರಂ! ಆರ್ತಾರಾವಂ!"

(ಉನ್ಮತ್ತ ಮನಸ್ಸಿನ ಜೊನ್ನ ಸಂತಸದಲಿ
ಗೂಬೆಯ ಕರ್ಕಶ ಕೂಗು, ಕಪ್ಪೆಗಳ ವಟವಟ
ಸಂಪು ಹೂಡಿದ ಕೂಲಿಗಳ
ಸಂಪು ಹೂಡಿದ ಮಡದಿ ಮಕ್ಕಳ
ಹಸಿವು ಕಗ್ಗತ್ತಲೆಯ ಬೇಗೆಯಲಿ
ಹಾಕಾರ! ಆರ್ತಸ್ವರ!)

ಕೇವಲ ಸೌಂದರ್ಯ ಸ್ವರೂಪವೇ ಕವಿತೆ ಎಂಬ ಭಾವನೆಯಿದ್ದ ಕಾಲದಲ್ಲಿ ಕವಿತೆ ಮೂಡಿಬರಲು ''ಯಾವುದೂ ಕಾರಣವಾಗಬಲ್ಲದು'' ಎಂಬ ಅಂಶ ಇಲ್ಲಿ ವ್ಯಕ್ತಗೊಂಡಿದೆ. ವಾಸ್ತವವಾಗಿ ಚಿಂತನಲೋಕವು ಜೀವಂತ ಜಗತ್ತಿನ ವ್ಯವಹಾರವನ್ನೇ ಅವಲಂಬಿಸಿದೆ ಎಂಬ ಮಾರ್ಕ್ಸ್ ಹಾಗೂ ಏಂಜಲ್ಸ್‌ರ ಅಭಿಮತವನ್ನಿಲ್ಲಿ ಗುರುತಿಸಬಹುದಾಗಿದೆ.

''ಪುಂಖಾನುಪುಂಖಂಗಾ
ಶ್ಮಶಾನಾಲಪಂಟಿ ನಿಘಂಟುವುಲ ದಾಟಿ
ವ್ಯಾಕರಣಾಲ ಸಂಕೆಳ್ಳು ವಿಡಿಚಿ
ಛಂದಸ್ಸುಲ ಸರ್ಪಪರಿಷ್ವಂಗ ವದಲಿ
ವಡಿಗಾ ವಡಿಗಾ
ವೆಲುವಡಿನ್ನೈ ವರುಗುಡಿನ್ನೈ
ನಾಯದ ನಡುಗಿನ್ನೈ''

*(ಪುಂಖಾನುಪುಂಖವಾಗಿ*
*ಸ್ಮಶಾನದಂಥ ನಿಘಂಟುಗಳ ದಾಟಿ*
*ವ್ಯಾಕರಣಗಳ ಸಂಕೋಲೆ ಕಳಚಿ*
*ಛಂದೋಬಂಧ ಸರ್ಪದಪ್ಪುಗೆ ಬಿಟ್ಟು*
*ಸರಸರನೆ*
*ಹೊರಬಿದ್ದಿತು ದೌಡಾಯಿಸಿತು*
*ನನ್ನೆದೆ ನಡುಗಿತು!)*

ಕಾವ್ಯಕ್ಕೆ ಇರುವ ಸಂಕೋಲೆಗಳನ್ನೂ ಮೀರಿ ಕವಿಯ ಭಾವ ದಾಂಗುಡಿಯಿಟ್ಟು ಕವಿತೆ ಯಾಯಿತೆಂಬಲ್ಲಿ ನಿಬಂಧನೆಗಳನ್ನು ಮೀರಿದ ಅಭಿವ್ಯಕ್ತಿಯ ವರ್ಣಕ ಗುಣವನ್ನಿಲ್ಲಿ ಗುರುತಿಸುತ್ತೇವೆ. ವಸ್ತು, ಆಶಯ, ರಚನೆ, ಧೋರಣೆ- ಹೀಗೆ ಕಾವ್ಯಬಂಧದಲ್ಲಿ ವಿನೂತನವೆನಿಸುವ ಸಾಧನೆಗಳನ್ನು ಮಾಡಿದ ಶ್ರೀ ಶ್ರೀಯವರ ಮನೋಧರ್ಮ ಇಲ್ಲಿ ಸಾಕಾರಗೊಂಡಿದೆ.

'ಬಾಟಸಾರಿ' (ದಾರಿಹೋಕ), 'ಭಿಕ್ಷುವರ್ಷೀಯಸಿ' (ಭಿಕ್ಷೆ ಬೇಡುವ ಮುದುಕಿ), 'ಉನ್ಮಾದಿ' (ಹುಚ್ಚ) - ಈ ಕಥನ ಕವನಗಳು ಮುಚ್ಚಿಟ್ಟ ಪುಸ್ತಕದಂತಿರುವ ನಗರಗಳಲ್ಲಿ ಅನಾಥರ, ಹಸಿದವರ, ಬಡವರ ಬದುಕಿನ ದುಃಸ್ಥಿತಿ, ದುರಂತಗಳನ್ನು ಕಡೆದಿರುವ ಅತಿ ವಾಸ್ತವತಾವಾದದ ನಿರೂಪಣೆಯಾಗಿದೆ.

'ಬಾಟಸಾರಿ' ಕವಿತೆ ಕೆ. ವಿ. ತಿರುಮಲೇಶರ 'ಪೆಂಟಯ್ಯನ ಅಂಗಿ' ನೆನಪು ಮಾಡಿದಂತೆ 'ಒಕರಾತ್ರಿ' (ಒಂದು ರಾತ್ರಿ) 'ತಮೋಭೀತಿ'ಯನ್ನು ನೆನಪಿಸುತ್ತದೆ. ಮಾನಸಿಕ ಒಂಟಿತನದಿಂದಾಗಿ ಸೌಂದರ್ಯ ಚೆಲ್ಲುವ ಪರಿಚಿತ ಪ್ರಕೃತಿಯೇ ಹೆದರಿಕೆಯನ್ನುಂಟುಮಾಡುವ ಪರಿಯನ್ನು 'ಒಕರಾತ್ರಿ' ಹಂತಹಂತವಾಗಿ ನಿರೂಪಿಸುವ ಚಿತ್ರಕ ಕವಿತೆ.

ಆಕಾಶ 'ಮರುಭೂಮಿ'ಯಾಗಿ, ಸಾಗರ 'ಮದಗಜದ ಕಳೇಬರ'ವಾಗಿ, ಬಹುಳ ಪಂಚಮಿ ಜ್ಯೋತ್ಸ್ನ 'ಬೆಳ್ಳಿಬೂದಿ'ಯಾಗಿ ಕಾಣುವ ಈ ವಸ್ತು ಪ್ರತಿರೂಪಗಳು ಒಂಟಿತನದ 'ಭಯ'ವನ್ನು ದಟ್ಟವಾಗಿ ಕವಿಸುತ್ತವೆ.

'ಚೇದುಪಾಟ' (ಕಹಿಹಾಡು) ಶೋಷಣೆಗೊಳಗಾದವರ ದಯನೀಯ ಸ್ಥಿತಿಯನ್ನು ವಿವರಿಸಿದ್ದರೆ, ಆ ಸ್ಥಿತಿಯನ್ನು ಕ್ರಾಂತಿಯ ಮೂಲಕ ನಿವಾರಿಸಿಕೊಳ್ಳಬಹುದೆಂಬ ಭರವಸೆಯನ್ನು 'ಅದ್ವೈತಂ' ನಿಖರವಾಗಿ ಹೇಳಿದೆ.

ಆರ್ಥಿಕ ಸ್ಥಿತಿಗನುಸಾರವಾದ ಜೀವನ ರೀತಿಯ ಮನೋಜ್ಞ ಚಿತ್ರವನ್ನು ನೀಡಿರುವುದೇ 'ಸಂಧ್ಯಾ ಸಮಸ್ಯಲು' (ಸಂಜೆಯ ಸಮಸ್ಯೆಗಳು). ಹಣವುಳ್ಳ ವಿದ್ಯಾರ್ಥಿ, ಉದ್ಯೋಗಸ್ಥ ಮೋಜಿಗಾಗಿ ಸಂಜೆ ಹೇಗೆ ಕಾಲಕಳೆಯಬೇಕೆಂದು ಚಿಂತಿಸಿದರೆ, ಸಾಲಕೊಟ್ಟವರ ಕಾಟ ತಡೆಯಲಾರದ ಬಡವನೊಬ್ಬ ನೇಣುಹಾಕಿಕೊಂಡೋ ಅಥವಾ ಸಮುದ್ರಕ್ಕೆ ಬಿದ್ದು ಸಾಯುವುದೋ ಎಂದು ಚಿಂತಿಸುತ್ತಾನೆಂಬ ವರ್ಗವ್ಯತ್ಯಾಸವನ್ನು ಗಂಭೀರವಾಗಿ ಚಿತ್ರಿಸಿದೆ. 'ವ್ಯತ್ಯಾಸಂ' (ವ್ಯತ್ಯಾಸ) ಕವಿತೆಯೂ ವರ್ಗಭೇದದ ಪರಸ್ಪರ ವೈರುಧ್ಯಗಳನ್ನು ಪರಿಣಾಮಕಾರಿಯಾಗಿ ನಿರೂಪಿಸುತ್ತದೆ.

"ನಿದ್ರಕುವೆಲಿಯೈ
ನೇ ನೊಂಟರಿನೈ
ನಾಗದಿಯೋಡಲ ಚೀಕಟಿಲೊ!"

*(ನಿದ್ರೆಗೆ ಹೊರತಾಗಿ
ನಾನು ಒಬ್ಬಂಟಿಯಾಗಿ
ನನ್ನ ಕೊಠಡಿಯೊಳಗೆ ಕತ್ತಲಲ್ಲಿ !)*

ತುಂಬಿದ ಜಗತ್ತಿನಲ್ಲಿ ಹಸಿವು ಕಾಡುವ ರೀತಿ, ಉಂಟುಮಾಡುವ ಒಂಟಿತನ ಇದ್ದಕ್ಕಿದ್ದಂತೆ ಅನಿರೀಕ್ಷಿತ ತಿರುವು ಪಡೆಯುತ್ತದೆ.! ಹೊಟ್ಟೆಯ ಹಸಿವು ರಟ್ಟೆಗೆ ಬಂದಾಗ ನಿದ್ದೆ ಕೊಡವಿ ಮೇಲೇಳುತ್ತಾನೆ. ವ್ಯವಸ್ಥೆಯ ತರತಮ ಅವನಲ್ಲಿ ಕ್ರಾಂತಿಯ ಹೊತ್ತುರಿವ ಜ್ವಾಲೆಯನ್ನು ಹೊತ್ತಿಸಿವೆ. ಅದರಲ್ಲಿ ಮಾನವ ನಿರ್ಮಿತ ವರ್ಗಭೇದ ಸುಟ್ಟು ಭಸ್ಮವಾಗುತ್ತದೆ.

"ಗುಂಡೆಲಕಪ್ಪಿನ ಕುಂಪಟಿತೊ
ಭಗ ಭಗ ಮಂಡೇ
ನಾಗದಿ ಚೀಕಟಿ ನಾಲುಕತೋ
ನಾಲಿಕ ಚೀಲಿನ ನಾಲುಕತೋ"

*(ಎದೆಯ ಮುಚ್ಚಿದ ಒಲೆಯಿಂದ
ಭಗ ಭಗ ಉರಿಯುವ
ನನ್ನ ಕೊಠಡಿ ಕತ್ತಲೆ ನಾಲಗೆಯಿಂದ
ನಾಲಿಗೆ ಸೀಳಿದ ಸರ್ಪಗಳಿಂದ)*

ಹಸಿವೆ ಉಂಟುಮಾಡುವ ಪ್ರತಿಕ್ರಿಯೆ 'ಭೀಕರ ಭೈರವ ನರಿಗಳ ಘೀಳುಗಳು!' ಎಂಬಲ್ಲಿನ ಉಪಮೆ ಪ್ರಭಾವಕಾರಿಯಾಗಿದೆ. ಈ ಪದ್ಯ ಸಮಗೆ ಪರಿಣಾಮದಲ್ಲಿ ಕುವೆಂಪು ಅವರ 'ಕಲ್ಕಿ'ಗೆ ಹತ್ತಿರವಾಗುತ್ತದೆ. ಇಡೀ ಜಗತ್ತೇ ಹಸಿದವನಿಗೆ ಕತ್ತಲೆ ತುಂಬಿದಂತೆ ಕಾಣುತ್ತದೆ "ಕೇಕ" ಪದ್ಯದಲ್ಲಿ. "ಹಸಿವೆಯಿಂದ ಸತ್ತ ವ್ಯಕ್ತಿಯೇ ಕ್ರಾಂತಿಯ ಚೈತನ್ಯವಾದ" ಎಂದು "ಆಕಾಶದೀಪಂ'ನಲ್ಲಿ ಚಿತ್ರಿಸುವ ಮೂಲಕ ಶ್ರೀ ಶ್ರೀ ನೇತ್ಯಾತ್ಮಕ ಅಂಶವನ್ನೇ ಪ್ರಗತಿಯ ಇತ್ಯಾತ್ಮಕ ಮೂಲವಾಗಿಸುವಲ್ಲಿ ವಿಪ್ಲವದ ಬಗೆಗಿನ ತಲಪುರಿಗೆಯನ್ನು ನಿಚ್ಚಳ ಸಾರಿದ್ದಾರೆ.

"ಬಲವಂತಲು ದುರ್ಬಲ ಜಾತಿನಿ
ಬಾನಿಸಲನು ಕಾವಿಂಚಾರು
ನರಹಂತಲು ಧರಾಧಿಪತುಲೈ
ಚರಿತ್ರಮುನ ಪ್ರಸಿದ್ಧಿಕೆಕ್ಕಿರಿ"

*(ಬಲಿಷ್ಠರು ದುರ್ಬಲ ಜಾತಿಯನ್ನು
ಗುಲಾಮರನ್ನಾಗಿ ಮಾಡಿದರು
ನರಹಂತಕರು ಧರಾಧಿಪತಿಗಳಾಗಿ
ಚರಿತ್ರೆಯಲಿ ಪ್ರಸಿದ್ಧಿಗೇರಿದರು)*

\+ + +

"ರಣರಂಗಂ ಕಾನಿ ಚೋಟು
ಭೂಸ್ಥಲಮಂತಾವೆದಿಕಿನ ದೊರಕದು
ಗತಮಂತಾ ತಡಿಸೆ ರಕ್ತಮುನ
ಕಾಕುಂಟೇ ಕನ್ನೀಳ್ಳುಲತೋ"

*(ರಣರಂಗ ಅಲ್ಲದ ಜಾಗ
ಭೂಭಾಗ ಹುಡುಕಿದರೂ ಸಿಗದು
ಗತವೆಲ್ಲಾ ತೊಯ್ದುರಕ್ತ
ಇಲ್ಲವೇ ಕಂಬನಿಯಿಂದ)*

\+ + +

"ಇತಿಹಾಸವು ಚೀಕಟಿಕೋಣಂ
ಅಟ್ಟಡುಗುನ ವಡಿ ಕಾನ್ಪಿಂಚನಿ
ಕಥೆಲನ್ನೀ ಕಾವಾಲಿಪ್ಪುಡು
ದಾಚೇಸ್ತೇ ದಾಗನಿ ಸತ್ಯಂ"

*(ಇತಿಹಾಸದ ಕತ್ತಲೆಕೋಣ
ತಳದಲ್ಲಿ ಹುದುಗಿ ಕಾಣಿಸಿದ
ಕಥೆಗಳೆಲ್ಲವೂ ಬೇಕೀಗ
ಮಾಚಿದರೂ ಮಾಚದ ಸತ್ಯ)*

\+ + +

"ನ್ಯೆಲುನದಿ ನಾಗರಿಕತಲೊ
ಸಾಮಾನ್ಯುನಿ ಜೀವನ ಮೆಟ್ಟದಿ?
ತಾಜಮಹಲೊ ನಿರ್ಮಾಣಾನಿಕಿ
ರಾಳ್ಲೆತ್ತಿನ ಕೂಲಿಲೆವ್ವರು?"

*(ನೈಲುನದಿಯ ನಾಗರಿಕತೆಯಲಿ
ಸಾಮಾನ್ಯನ ಜೀವನ ಎಂಥಾದ್ದು?
ತಾಜ್‌ಮಹಲ್ ನಿರ್ಮಾಣಕ್ಕೆ
ಕಲ್ಲು ಹೊತ್ತ ಕೂಲಿಗಳ್ಯಾರು?)*

\+ + +

"ಸಾಮ್ರಾಜ್ಯವು ದಂಡಯಾತ್ರಲೊ
ಸಾಮಾನ್ಯುಲ ಸಾಹಸಮೆಟ್ಟದಿ?
ಪ್ರಭುವೆಕ್ಕಿನ ಪಲ್ಲಕಿಕಾದೊಯ್
ಅದಿಮೋಸಿನ ಬೋಯಾಲೆವ್ವರು?"

*(ಸಾಮ್ರಾಜ್ಯದ ದಂಡಯಾತ್ರೆಯಲಿ
ಸಾಮಾನ್ಯರ ಸಾಹಸ ಎಂಥಾದ್ದು?
ಅರಸನೇರಿದ ಪಲ್ಲಕ್ಕಿ ಅಲ್ಲವೋ
ಅದನ್ನು ಹೊತ್ತ ಬೋಯಿಗಳ್ಯಾರು?)*

ನಮಗೆ ಬೇಕಾದಂತಹ ಇತಿಹಾಸ, ಪ್ರಸ್ತುತವಾದ ಸಾಹಿತ್ಯ ರಕ್ತಮಾಂಸ ತುಂಬಿದ ಸದೃಢ ಆಕೃತಿಯಲ್ಲಿದೆ. ಶ್ರೀಶ್ರೀ ಅವರ ಲೇಖನಿಯ ತೀಕ್ಷ್ಣತೆಗೆ, ಗಟ್ಟಿತನಕ್ಕೆ "ದೇಶಚರಿತ್ರುಲು" (ದೇಶದ ಚರಿತ್ರೆಗಳು) ಕವನದ ಈ ಸಾಲುಗಳೇ ಸಾಕ್ಷಿ.

ಪುರಿಜಗನ್ನಾಥ ರಥೋತ್ಸವದಂದು ಎಲ್ಲಾ ವರ್ಣದವರೂ ಒಟ್ಟಿಗೆ ಕಲೆತು ಭೋಜನ ಮಾಡುತ್ತಾರೆ. ಜಗನ್ನಾಥ ರಥ ಚಕ್ರಗಳನ್ನು ಸಮತಾ ಸಮಾಜಕ್ಕೆ ಸಂಕೇತವಾಗಿ ಗ್ರಹಿಸಿದ ಶ್ರೀ ಶ್ರೀ ಕ್ರಾಂತಿಯ ನಂತರವೂ ಈ ಸಮತಾಸಮಾಜವೇ ಶಾಶ್ವತವಾಗಿರಬೇಕೆಂದು ಬಯಸಿರುವ ಉದಾತ್ತವಾದ, ಮಹತ್ವದ ಕವಿತೆಯೇ "ಜಗನ್ನಾಥುನಿ ರಥಚಕ್ರಾಲು" (ಜಗನ್ನಾಥ ರಥ ಚಕ್ರಗಳು)

"ಈ ಲೋಕಂ ಮೀದೇನಂಡಿ
ಮೀರಾಜ್ಯಂ ಮೀರೇಲಂಡಿ"

*(ಈ ಲೋಕ ನಿಮ್ಮದೇರೀ
ನಿಮ್ಮ ರಾಜ್ಯ ನೀವಾಳಿರಿ....)*

ಆಳ್ವಿಕೆಯ ನಿಜವಾರಸುದಾರರನ್ನು ಕವಿ ಆಹ್ವಾನಿಸುತ್ತಿರುವ ಈ ಸಾಲುಗಳೇ ಕವಿತೆಯ ಆತ್ಮ.

''ಸಾಹಿತ್ಯದಲ್ಲೂ, ಜೀವನದಲ್ಲೂ ಸುಗಮತೆಯೇ ಸಾಧಿಸತಕ್ಕ ಆಶಯ'' ('ಸುಗಮ'- ಲೇಖನ) ಎಂದಿರುವ ಶ್ರೀ ಶ್ರೀ 'ಪ್ರತಿಜ್ಞೆ' ಕವಿತೆಯಲ್ಲಿ ಅದನ್ನು ಸ್ಪಷ್ಟಪಡಿಸಿದ್ದಾರೆ.

ಮನುಕುಲದ ಏಳುಬೀಳಿನ ವೈವಿಧ್ಯ, ವೈಚಿತ್ರ್ಯಗಳು 'ಮಾನವುಡಾ!' (ಮಾನವನೇ!), ಹೋರಾಟವೊಂದೇ ಸತ್ಯ ಎಂಬ ತತ್ವ 'ಮಿಥ್ಯಾವಾದಿ' ಕವನಗಳ ಅಂತರ್ಯ.

ಶ್ರೀ ಶ್ರೀ ಅವರ ಹದಿನೇಳು ಕವನಗಳ ಸಂಗ್ರಹವೇ ''ಮತ್ತೊಂದು ಪ್ರಸ್ಥಾನ'' (ಮರೋಪ್ರಸ್ಥಾನಂ) ಅವರು ಇದನ್ನು ಶ್ರೀಕಾಕುಳಂ ಹೋರಾಟದ ನಂತರ ಬರೆದರು. (೧೯೬೭ರಲ್ಲಿ ಕ್ರಾಂತಿಕಾರಿಗಳ ನೇತೃತ್ವದಲ್ಲಿ ಗಿರಿಜನ, ರೈತಾಪಿ ಜನರು ಸಶಸ್ತ್ರ ಹೋರಾಟ ನಡೆಸಿದ ಪ್ರದೇಶವೇ 'ಶ್ರೀಕಾಕುಳಂ' ಎಂಬುದನ್ನಿಲ್ಲಿ ಸ್ಮರಿಸಬಹುದು.)

ಇಲ್ಲಿ ಆ ಹೋರಾಟದಲ್ಲಿ ಭಾಗಿಯಾಗಿ ಬಲಿದಾನಗೊಂಡವರ ಪ್ರಸ್ತಾಪವಿದೆ. ಅಳಿದ ಚೈತನ್ಯಗಳ ನೆನಪು ಕ್ರಾಂತಿಗೆ ಮತ್ತಷ್ಟು ಬಲ, ಹುರುಪನ್ನು ತುಂಬುತ್ತದೆ ಎಂಬ ಆಶಯವೇ ತುಂಬಿದೆ.

ಚಲನಚಿತ್ರಗಳಿಗೂ ಸತ್ವಭರಿತ, ಸದಾಶಯದ ಸಾಹಿತ್ಯ ರಚಿಸಿದ ಕವಿ ಶ್ರೀ ಶ್ರೀ ಅವರು ಕಾವ್ಯವನ್ನು ದಿವಿಯಿಂದ ಭುವಿಗೆ ತರುವ ಮೂಲಕ ತಮ್ಮದೇ ಆದ ವಿಶಿಷ್ಟ ಛಾಪು ಮೂಡಿಸಿದರು. ಆಶಯ, ಅಭಿವ್ಯಕ್ತಿ, ರೂಪಣ - ಎಲ್ಲಾ ಕೋನಗಳಿಂದಲೂ ಅವರು ಸಮತಾಕಾವ್ಯದ ಹೆದ್ದಾರಿಯನ್ನು ನಿರ್ಮಿಸಿದರು. ಆ ದಾರಿ ಎಲ್ಲರಿಗೂ ಬೇಕಾದ ದಾರಿಯಾಗಿರುವುದರಿಂದಲೇ ಅವರ ಕಾವ್ಯ ಅಖಂಡವಾಗಿ, ಮೌಲಿಕವಾಗಿ ತೆಲುಗು ಸಾಹಿತ್ಯ ಚರಿತ್ರೆಯಲ್ಲಿ ತನ್ನದೇ ಆದ ಭದ್ರಸ್ಥಾನವನ್ನು ಪಡೆದಿದೆ.

* * *

**ಗ್ರಂಥಋಣ**


೧. ''ಮಹಾಪ್ರಸ್ಥಾನಂ'' (ತೆಲುಗು ಆವೃತ್ತಿ)

೨. ''ಶ್ರೀ ಶ್ರೀ ಅವರ ಮಹಾಪ್ರಸ್ಥಾನ ಮತ್ತೊಂದು ಪ್ರಸ್ಥಾನ'' ಆಯ್ದ ಕವಿತೆಗಳು ಕನ್ನಡಾನುವಾದ : ಎಚ್. ಎಸ್. ಶಿವಪ್ರಕಾಶ್, ಬಂಜಗೆರೆ ಜಯಪ್ರಕಾಶ್, ರಾಘವೇಂದ್ರರಾವ್

೩. Sri Sri Miscellany, Edited by: - K. B. Ramana Reddy

# ಶರತ್ಕಾಲ

ಚೀನೀ ಮೂಲ : ದೈಸಾಕು ಇಕೆದಾ
ಅನು : ಡಿ. ಭರತ್

ಬಂದಿದೆ ಶರತ್ಕಾಲ
ನೀಲಿ ಚಂದ್ರ ಬೆಳಕಲಿ,
ಕ್ರಿಮಿ ಕೀಟಗಳ ಅಳಲಲಿ,
ವಸಂತನಂತೆ
ಕವಿಯ ಭಾವವೆದ್ದಿದೆ ಚೆಲುವಲಿ !

ನಿಶ್ಯಬ್ಧ....... ಶರತ್ಕಾಲ
ಕವಿಯ ಆಶಯು ಸುಸ್ಥಿರ
ಉದ್ವೇಗದಿಂದ ಅಥವಾ ತೀವ್ರ ಹರಿತದಿಂದ;

ಉದಾರ..... ಶರತ್ಕಾಲ

ದಯಾ ವಿಚಾರಗಳ ಜೊತೆಗೆ
ನ್ಯಾಯಕ್ಕಾಗಿ ಹೋರಾಟದ ಮುನ್ನಡೆ
ಕಾಲದೊಳಗಿನ ಕನ್ನಡಿಯಂತೆ

ಸ್ಫಟಿಕದಷ್ಟು ನಿರ್ಮಲ..... ಶರತ್ಕಾಲ
ಒಳಿತು ಕೆಡುಕಿನ ಜಾಲದ ನಡುವೆ
ಕವಿಯ ಆಂತರ್ಯದ ಭಾವ
ಉಳಿವುದು ಸ್ವಚ್ಛ
ಶರತ್ಕಾಲದ ಸಮಯ-
ಅಗಣಿತ ಭಾವ ಸಮುಚ್ಚಯ

* * *

# ಪ್ರೀತಿಯೆಂದರೇನು?

ಗುಜರಾತೀ ಮೂಲ : ಮುರಳಿ ಮೆನನ್
ಅನು : ಡಿ. ಭರತ್

ಪ್ರೀತಿಯೆಂಬುದು ಕಲ್ಲೇ?
ಚಿಪ್ಪೊಡೆದಿದೆ
ಒಳಗಿನ ಮುತ್ತಿನ ಸೌಂದರ್ಯ ತೋರಲು!

ಪ್ರೀತಿಯೆಂಬುದು ಗಾಳಿಯೇ?
ಮೋಡಗಳ ಚದುರಿಸಿದೆ
ಹಿಮ ತುಂಬಿದ ಪರ್ವತಗಳ ಕಾಣಿಸಲು!

ಪ್ರೀತಿಯೆಂಬುದು ತಾಯಿಯ ಭಾವನೆಯೇ?
ಕುಡಿಸುವಾಗ ಮಗುವಿಗೆ
ತನ್ನೆದೆ ಹಾಲು ಮೊಟ್ಟ ಮೊದಲು

ಪ್ರೀತಿಯೆಂಬುದು ಪರಿಸರವಾದಿಯ ಆನಂದವೇ?
ಯೋಜಿಸಲು ಅವ
ನೆಡಲು ನೂರು ಸಸಿಗಳು;

ಪ್ರೀತಿಯೆಂಬುದು ಅಜ್ಜನ ದೂರದೃಷ್ಟಿಯೇ?
ಅವ ಬಿತ್ತಿದ ಬೀಜದಿಂದಾದ
ಹಣ್ಣುಗಳ ಮೊಮ್ಮಕ್ಕಳು ಸವಿಯಲು;

ಪ್ರೀತಿಯೆಂಬುದು ಪ್ರಿಯನ ನೋವೇ?
ಬೇರೊಬ್ಬನಿಗಾಗಿ ಅವನನ್ನ ಪ್ರಿಯೆ ತೊರೆದಿರಲು.

* * *

# ನೀ ಎಂದು ಬರುವೆ

ಉರ್ದು ಮೂಲ : ವಜೀರ್ ಆಘಾ
ಅನು : ಎಂ. ಉದಯಕುಮಾರಿ

ಮಾತುಗಳೆ ಮೌನಗಳು  ನೀ ಎದುರಿಗಿದ್ದಾಗ
ನೀನಿಲ್ಲಿ ಬಂದಾಗ ಸದ್ದುಗದ್ದಲವಿಲ್ಲ
ನೀ ಹೊರಟರೆ ಸಾಕು ಮನದ ತುಮುಲ ಆರಂಭ
ಅರೆಬಿರಿದ ಹೂವುಗಳು ಹೆಜ್ಜೆಯಿಡುತಿವೆ
ಆ ಸದ್ದು ಕಿವಿಯಲ್ಲಿ ಮರಗುಟ್ಟುತ್ತಿದೆ

ಬೀಸುವ ಗಾಳಿ, ಮುಚ್ಚಿದ ಮನೆ
ನಿಶ್ಚಲವಾದ ದೇಹಗಳು ಮಾತಿನಲ್ಲಿ
ಕಳೆದ ಕ್ಷಣಗಳ ನೆನಪಿಸುವ
ಗಿರಿ ಶಿಖರ ಬೆಳ್ಳಿಮೋಡ
ಉಬ್ಬರಗೊಳ್ಳುವ ಕಡಲ ಅಲೆಗಳು
ಎದುರಿಗೆ ಮಿಸುಕಾಡದ ತುಟಿಗಳು
ಕಣ್ಣಿರಪ್ಪೆಯ ಭಾರದಲ್ಲಿ
ಮುತ್ತಾದ ಕಂಬನಿಯ ಹನಿಗಳು
........ ನಿಶ್ಶಬ್ದ ಮೌನದಲ್ಲಿ !

ಕಿವುಡು ಕಿವಿಗಳಿಗೆರಗಿದ ದನಿಗಳೆಲ್ಲ
ಪಟಗುಟ್ಟುತ್ತಿವೆ ಶಬ್ದಗಳ ರೂಪದಲ್ಲಿ
ಬದುಕು ಮತ್ತೆ ನೇಯುತ್ತದೆ
ಹಸನಾದ ಬದುಕಿನ ಬಲೆಯನ್ನು
ತಟಸ್ಥ ಕ್ರಿಯೆಗೆ ಚಾಲನೆ ನೀಡುತ್ತದೆ

ಇಚ್ಛೆಗನುಗುಣವಾದ ಸೊಗಸನ್ನು.
ಗೂಡು ಬಿಟ್ಟಿರುವ ಹಕ್ಕಿ ಹಾರಿ ಹೋಗಿದೆ
ಎಲ್ಲಿ, ಏನು, ದೇವರಿಗೆ ಮಾತ್ರ ಗೊತ್ತು
ನಾನು ಮಾತ್ರ ಕಾಯುತ್ತಿದ್ದೇನೆ
ಚದುರಿಹೋದ ಖಾಲಿ ಗೂಡಿನ ಬಳಿ ಕುಳಿತು
ನೀ ಬರುವೆ ಎಂದು? ಎಂದು
ಇರಲಿ ಬಿಡು ಎಂದಾದರೊಂದು ದಿನ
ಕಾಲ ತಾಣಗಳ ಕೂಟದಲ್ಲಿ
ಬೆರೆಯುವೆವು ಮತ್ತೆ ಹೊಸ ಮಿಲನದಲ್ಲಿ

* * *

# ಸೈಯದ್ ಅಲಿ ಅಬ್ಬಾಸ್ ಹುಸೈನಿ

ಸಮಕಾಲೀನ ಉರ್ದು ಸಾಹಿತಿಗಳಲ್ಲಿ ಉನ್ನತ ಹಾಗೂ ಮುಖ್ಯ ಕಥೆಗಾರ. "ಬಾಸಿ ಫೂಲ್" ಇವರ ಸುಪ್ರಸಿದ್ಧ ಕಥಾ ಸಂಕಲನ. ಇವರು ಉರ್ದು ಕಥೆಯನ್ನು ಹೊಸ ಹಾದಿಯ ಮೇಲೆ ತೆಗೆದುಕೊಂಡು ಹೋದವರು. ಆದರೆ ನಿಜಜೀವನದಲ್ಲಿ ಹಳೇ ಹಾದಿಯನ್ನು ಬಿಟ್ಟು ಹೊರಬರಲಿಲ್ಲ. ಅದೇ ಅಗಲವಾದ ಪಾಯಜಾಮ, ಅದೇ ಶೇರ್ವಾನಿ, ಸೂಟು ಇಲ್ಲ ಬೂಟು ಇಲ್ಲ. ಭೂಮಿ ಮೇಲೆ ನಡೆಯುತ್ತಿದ್ದರೆ ಆಕಾಶದಲ್ಲಿ ಹೆಜ್ಜೆ ಬೀಳುತ್ತವೇನೋ ಎಂಬ ನಡತೆಯೂ ಇರಲಿಲ್ಲ. ಇಂತಹ ಸಾಹಿತಿಯ ಈ ಸರಳತೆ ಎಲ್ಲರಿಗೂ ಆಶ್ಚರ್ಯ ಉಂಟುಮಾಡುವಂತಹುದೇ. ಕಲೆಯ ಪರಿಣಿತದ ಮೇಲೆ ವಿಮರ್ಶಾತ್ಮಕ ದೃಷ್ಟಿಯಿಂದ ಇವರು ಸಾಹಿತಿಗಳ ವೃತ್ತದಲ್ಲಿ ವಿಶೇಷ ಮರ್ಯಾದೆ ಪಡೆದಿದ್ದರು.

# ಚಾಂದ್ ಬೀಬಿ (ಏಕಾಂಕ ನಾಟಕ)

ಉರ್ದು ಮೂಲ : ಸೈಯದ್ ಅಲಿ ಅಬ್ಬಾಸ್ ಹುಸೈನಿ
ಅನು : ಡಾ॥ ಸಿಬ್ಗತ್ ಉಲ್ಲಾ

## ಪಾತ್ರಗಳು

ಚಾಂದ್‌ಬೀಬಿ : ಅಹ್ಮದ್ ನಗರದ ರಾಜಕುಮಾರಿ, ಈಗ ಕೋಟೆಯೊಳಗೆ ನೆಲೆಯಾಗಿದ್ದಾಳೆ
ಶೇರ್‌ಅಲಿ : ದಖಿನಿ ಸರ್ದಾರ, ಸೈನ್ಯಾಧಿಕಾರಿ
ಜೀತಖಾನ್ : ಹಬಷಿ ( ಅಬಸಿನಿಯಾ ನಿವಾಸಿ ) ಶಿಖಂಡಿ ಮಂತ್ರಿ
ಮುಫ್ತಿ : ಧರ್ಮಾಧಿಕಾರಿ ದಯಾಳು, ಮಹನೀಯರು
( ಬೇರೆ ಸರ್ದಾರರು, ಸೈನ್ಯದ ಅಧಿಕಾರಿಗಳು, ಸಾರ್ವಜನಿಕರು, ಸೇವಕಿಯರು )

## ಮೊದಲ ದೃಶ್ಯ

*(ಚಾಂದ್‌ಬೀಬಿ ಸಿಂಹಾಸನದ ಮೇಲೆ ಕುಳಿತು ಯೋಚಿಸುತ್ತಿರುವಳು, ಸರ್ದಾರರು ಕುಳಿತುಕೊಳ್ಳಲು ಇಕ್ಕೆಡೆಗಳಲ್ಲಿ ಮಸನದಗಳಿವೆ (ಒರಗಿ ಕೂರಲು ಉಪಯೋಗಿಸುವ ದಿಂಬುಗಳು) ಆದರೆ ಈಗ ದರ್ಬಾರಿನಲ್ಲಿ ಯಾರೂ ಇಲ್ಲ. ಅಂದರೆ ಅವಳೊಬ್ಬಳೇ ಇದ್ದಾಳೆ. ಹೊರಗಿನಿಂದ ತೋಪು ಮತ್ತು ಬಂದೂಕಿನ ಶಬ್ದ ಕೇಳಿ ಬರುತ್ತಿದೆ. ಒಮ್ಮೊಮ್ಮೆ ''ಶಾಬಾಶ್ ಶಾಬಾಶ್! ಧೈರ್ಯವಾಗಿ! ಧೈರ್ಯವಾಗಿ!'' ಎಂಬ ಶಬ್ದ ಕೇಳಿಸುತ್ತಿದೆ. ಹಾಗೂ 'ಅಲ್ಲಾಹು ಅಕ್ಬರ್' ಘೋಷಣೆಗಳು ಕೇಳಿಬರುತ್ತಿದೆ. ಆಯುಧಗಳ ಝೇಂಕಾರ ಹಾಗೂ ಬಿರುಸು ಬಾಣಗಳ ಸದ್ದು. ಇವೆಲ್ಲವನ್ನು ಕೇಳಿದರೆ ಕೋಟೆಯ ಹೊರಗೆ ಆಕ್ರಮಣಕಾರರು ಪೂರ್ಣವಾಗಿ ತಮ್ಮ ಪ್ರಯತ್ನಗಳಲ್ಲಿ ತೊಡಗಿದ್ದಾರೆ, ಅವರಿಗೆ ಕೋಟೆಯ ರಕ್ಷಕರು ಸರಿಯಾದ ಉತ್ತರ ಕೊಡುವುದರಲ್ಲಿ ಮಗ್ನರಾಗಿದ್ದಾರೆ ಎನ್ನಿಸುತ್ತದೆ. ಚಾಂದ್‌ಬೀಬಿ ಬಹಳ ಆಳವಾಗಿ ಯೋಚಿಸುತ್ತಾ ಕೈ ಕೊಡವುತ್ತ ಎದ್ದು ನಿಂತುಕೊಳ್ಳುತ್ತಾಳೆ. ಹಾಗೂ ನಿರಾಶೆಯ ಧ್ವನಿಯಲ್ಲಿ ತನಗೆ ತಾನೇ ಹೇಳಿಕೊಳ್ಳುತ್ತಾಳೆ.)*

ಚಾಂದ್ ಬೀಬಿ : ಎಲ್ಲಿಯವರೆಗೆ ಆಹ್, ಎಲ್ಲಿಯವರೆಗೆ ಈ ಯುದ್ಧ ಮುಂದುವರೆಯುವುದು. ಹಾಗೆಯೇ ! ನನ್ನ ದೇಶ! ಪ್ರೀತಿಯ ದೇಶ! ಅಕ್ಬರನ ಪ್ರಬಲವಾದ ಸೈನ್ಯ ಮತ್ತು ಅಹ್ಮದ್ ನಗರದ ಕೇವಲ ಒಂದು ಹಿಡಿ ಸಿಪಾಯಿಗಳು. ಒಂದು ಕಡೆ ಗಂಗೆ ಯಮುನೆಯರ ಪ್ರವಾಹ, ಮತ್ತೊಂದು ಕಡೆ ಮಣ್ಣಿನ ಹಸಿಗೋಡೆ! ಕೆಂಪು ಬಿರುಗಾಳಿ ಮತ್ತು ಒಂದು ಚಿಟಕೆ ಹಿಟ್ಟು! ಆದರೆ - ಆದರೆ ಏನು

ಮಾಡಲಿ ನಾನು, ಈ ಭೂಮಿಯಲ್ಲಿ ಹುಟ್ಟಿ ಬೆಳೆದಿದ್ದೇನೆ. ಇದರಲ್ಲಿ ನಮ್ಮ ಪೂರ್ವಜರ ಮೂಳೆಗಳು ಹೂತಿವೆ. ಶತ್ರುಗಳ ಕುದುರೆಗಳ ಗೊರಸುಗಳಿಂದ ಇದು ಧ್ವಂಸವಾಗುತ್ತಿರುವುದನ್ನು ನೋಡಲೇ! ಇದು ನನ್ನಿಂದ ಸಾಧ್ಯವಿಲ್ಲ. ಆದರೆ ಹೇಗೆ ಕಾಪಾಡಲಿ, ಹೇಗೆ ರಕ್ಷಿಸಲಿ! ನಿಜಾಮುಲ್ ಮುಲ್ಕ್ ಬಹಾದ್ದುರ! ಸುಳ್ಳುಗಾರ, ಸ್ಥಾನಮಾನ ಪಡೆಯುವ ದುರಾಸೆಯುಳ್ಳವನು. ಜೀತನಂತಹ ಗುಲಾಮರು ಮತ್ತು ಕರಿಜನರ ಜೋರು! ಅಯ್ಯೋ ದೇವರೆ, ಏನು ಮಾಡಲಿ, ಏನು ಮಾಡದೇ ಇರಲಿ! ಸಂಧಿಮಾಡಿದರೆ ಮರ್ಯಾದೆ ಹೋಗುತ್ತದೆ! ಯುದ್ಧ ಮುಂದುವರೆದರೆ ಸಾಮ್ರಾಜ್ಯವೇ ಹೋಗುತ್ತದೆ!

*(ಯಾರೋ ಬರುವ ಸದ್ದು ಕೇಳಿಸುತ್ತದೆ. ಬರುವವನು ಮುಚ್ಚಿರುವ ಬಾಗಿಲನ್ನು ತಟ್ಟುತ್ತಾನೆ)*

ಚಾಂದ್‌ಬೀಬಿ : ಯಾರು? ಒಳಗೆ ಬನ್ನಿ.

*(ಶೇರ್‌ಅಲಿ ಸೈನಿಕನ ಉಡುಪಿನಲ್ಲಿ ಒಳಗೆ ಪ್ರವೇಶಿಸುತ್ತಾನೆ. ಕಣ್ಣಲ್ಲಿ ಭಯ, ಹರೆಯಿಂದ ಮನಸ್ಸಿನ ಪೇಚಾಟ ತಿಳಿಯಬಹುದು)*

ಚಾಂದ್‌ಬೀಬಿ : ಏನು ವಿಷಯ ಶೇರ್ ಅಲಿ?

ಶೇರ್ ಅಲಿ : ಸುಲ್ತಾನಾ! ಈಗ ರಕ್ಷಣೆ ಮಾಡಲು ಸಾಧ್ಯವಾಗುತ್ತಿಲ್ಲ.

ಚಾಂದ್‌ಬೀಬಿ : ಏಕೆ?

ಶೇರ್ ಅಲಿ : ಶತ್ರುಗಳ ಸೈನ್ಯ ಹೇಗೆ ಹೆಚ್ಚುತ್ತಿದೆಯೋ ಅದೇ ರೀತಿ ನಮ್ಮ ಸಂಖ್ಯೆ ಕಡಿಮೆಯಾಗುತ್ತಿದೆ.

ಚಾಂದ್‌ಬೀಬಿ : ಆದರೆ ಸೋಲು ಗೆಲವುಗಳು ಸಂಖ್ಯೆಯ ಆಧಾರದ ಮೇಲಲ್ಲ. ಗೆಲವು ಭುಜಬಲದ ಶಕ್ತಿ ಹಾಗೂ ಹೃದಯದ ಗಟ್ಟಿತನದ ಮೇಲೆ ನಿರ್ಧಾರ ವಾಗಿರುತ್ತದೆ. ಮೊದಲನೆಯ ಸಲವೂ ಮೊಗಲರ ಸೈನ್ಯ ಅಸಂಖ್ಯಾತವಿತ್ತು. ಆದರೆ ಅವರ ವಿರುದ್ಧ ಹಿಡಿ ತುಂಬಿದಷ್ಟು ಅಹ್ಮದನಗರ ನಿವಾಸಿಗಳಿದ್ದರಲ್ಲವೆ?

ಶೇರ್ ಅಲಿ : ಆದರೆ ಸುಲ್ತಾನಾ ನಾವೊಬ್ಬರೇ ಏನೇನು ಮಾಡಲು ಸಾಧ್ಯ? ಆಗ ಸುಹೇಲನ ಸೈನ್ಯ ನಮ್ಮ ಸಹಾಯಕ್ಕೆ ಬಂದಿತ್ತು. ಈಗ ಎಲ್ಲಿಂದಲೂ ಸಹಾಯದ ಆಸೆ ಇಲ್ಲದಂತಾಗಿದೆ.

ಚಾಂದ್‌ಬೀಬಿ : ಹಾಗಾದರೆ ನೀವು ಏನು ಬಯಸುತ್ತೀರಿ?

ಶೇರ್ ಅಲಿ : ಮುಘಲರಿಂದ ನಮ್ಮ ಪರಾಭವದ ಕರಾರು......

ಚಾಂದ್‌ಬೀಬಿ : (ಘರ್ಜಿಸುತ್ತಾ) ಏನು :........... ಒಬ್ಬ ಸೈನಿಕನಾಗಿ ನೀನು ಹೀಗೆ ಹೇಳುವೆಯಾ?

ಶೇರ್ ಅಲಿ : ಹೌದು, ನಾನು ಹೇಳುತ್ತಿದ್ದೇನೆ. ಇದು ನಾವು ಮೊಂಡು ಧೈರ್ಯ ತೋರಿಸುವ ಸಮಯವಲ್ಲ.

ಚಾಂದ್‌ಬೀಬಿ : ನಿನಗೆ ನಾಚಿಗೆಯಾಗುವುದಿಲ್ಲವೆ?

ಶೇರ್ ಅಲಿ : ನಮಗಿಂತಲೂ ಶಕ್ತಿಶಾಲಿಯಾದಂತಹವರಿಂದ ಸೋಲೊಪ್ಪಿಕೊಳ್ಳುವುದರಲ್ಲಿ ನಾಚಿಗೆ ಏನೂ ಇಲ್ಲ.

ಚಾಂದ್‌ಬೀಬಿ : ಖಂಡಿತ! ಆದರೆ ಇದು ದೇಶದ ಮತ್ತು ನಾಡಿನ ಕಾರ್ಯ.

ಶೇರ್ ಅಲಿ : ಅಹ್ಮದನಗರ ನಮ್ಮ ದೇಶವಲ್ಲ, ನಾವು ಇರಾನ ಹಾಗು ತುರ್ಕಿ ದೇಶದವರು.

ಚಾಂದ್‌ಬೀಬಿ : ಇಲ್ಲಿಂದ ಹೊರಟು ಹೋಗು! ನನ್ನಿಂದ ದೂರವಾಗು ದ್ರೋಹಿ! ನೀನು ಅಫ್‌ಘಾನಿಸ್ತಾನ ಹಾಗೂ ತುರ್ಕಿಸ್ಥಾನದವನಿರಬಹುದು ನೀನು ಅಲ್ಲಿಗೇ ಹೊರಟು ಹೋಗು! ಈ ದೇಶದಲ್ಲಿ ನಿನ್ನಂತಹವರಿಗೆ ಜಾಗವಿಲ್ಲ! ಚಾಂದಬೀಬಿ ಈ ದೇಶದಲ್ಲಿ ಹುಟ್ಟಿದ್ದಾಳೆ, ಇಲ್ಲಿಯವರೆಗೂ ಇಲ್ಲೇ ಜೀವಂತವಾಗಿದ್ದಾಳೆ, ಹಾಗೆಯೇ ಸತ್ತು ಇಲ್ಲೇ ದಫನಾಗುತ್ತಾಳೆ.

ಶೇರ್ ಅಲಿ : (ಕೋಪಗೊಂಡು) ಈ ಮಾತುಗಳು ನಿಮಗೆ ಶೋಭೆ ಕೊಡುವುದಿಲ್ಲ! ನಿಮ್ಮ ಪೂರ್ವಜರಿಗಾಗಿ ನಮ್ಮ ಖಡ್ಗಗಳೇ ಈ ದೇಶವನ್ನು ಗೆದ್ದಿರುವುದನ್ನು ಮರೆಯುತ್ತಿದ್ದೀರಾ? ಇಂದಿಗೂ ಕೂಡ ನಿಮ್ಮ ಕೋಮಲ, ಮೃದುವಾದ ಕೈಗಳಲ್ಲ, (ತನ್ನ ಕೈ ತೋರಿಸುತ್ತ) ನನ್ನ ಈ ದಪ್ಪ ದಪ್ಪ ಕೊಳಕು ಹಾಗೂ ಗಟ್ಟಿಯಾದ ಕೈಗಳೇ ಈ ಸಾಮ್ರಾಜ್ಯದ ಭಾರವನ್ನು ತಡೆದಿವೆ.

ಚಾಂದ್‌ಬೀಬಿ : ದಪ್ಪ, ಒರಟು ಹಾಗೂ ಕೊಳಕುತನದಿಂದ ಯಾವುದೇ ಕೈ ಶಕ್ತಿಶಾಲಿ ಯಾಗುವುದಕ್ಕೆ ಸಾಕ್ಷ್ಯಾಧಾರವಿಲ್ಲ.

ಶೇರ್ ಅಲಿ : ಇದರ ಶಕ್ತಿಯನ್ನು ನೋಡುವಿರಾ ಸುಲ್ತಾನಾ?

ಚಾಂದ್‌ಬೀಬಿ : ಅದರ ಶಕ್ತಿ ನನಗೇನು ತೋರಿಸುವೆ? ಚಾಂದ್‌ಸುಲ್ತಾನ ದಕ್ಷಿಣ ಭಾರತದ ಅತ್ಯಂತ ಶಕ್ತಿಶಾಲಿ ಮತ್ತು ಬಲವಾದ ಗಂಡಿನ ಜೊತೆ ಕತ್ತಿ ವರಸೆ ಆಡುವುದರಲ್ಲಿ ಹಾಗೂ ಬಾಣ ಹೊಡಯುವುದರಲ್ಲಿ ಏನೂ ಕಡಿಮೆ ಇಲ್ಲ.

ಶೇರ್ ಅಲಿ : ಹಾಂ, ಏನು ಗರ್ವ!

ಚಾಂದ್‌ಬೀಬಿ : ಚಾಂದ್ ಗರ್ವತೋರಿಸುತ್ತಿಲ್ಲ! ಆದರೆ ಅವಳು ಯಾರಿಗೂ ಹೆದರುವುದಿಲ್ಲ ಹಾಗೂ ಯಾರ ಒತ್ತಡಕ್ಕೂ ಮಣಿಯುವವಳಲ್ಲ. ಮತ್ತೆ .....ಮತ್ತೆ ಅವಳು ಮುಘಲರಿಂದ ಹೆದರಿ ಸೋಲೊಪ್ಪಿಕೊಳ್ಳಲು ಸಿದ್ಧಳಿಲ್ಲ.

ಶೇರ್ ಅಲಿ : ಹಾಗಾದರೆ ನಾನು ಸೋಲೊಪ್ಪಿಕೊಳ್ಳು ಎಂದಿದ್ದು, ನಾನು ಮುಘಲರಿಗೆ ಹೆದರುತ್ತೇನೆಂದು ಅರ್ಥವೆ?

ಚಾಂದ್‌ಬೀಬಿ : ಹೆದರುವುದಿಲ್ಲ, ಆದರೆ ಲಂಚ ತೆಗೆದುಕೊಂಡಿದ್ದೀಯಾ!

ಶೇರ್ ಅಲಿ : (ವಿಪರೀತ ಕೋಪದಿಂದ) ಏನೆಂದಿರಿ?

ಚಾಂದ್‌ಬೀಬಿ : ನಿಜಾಂಶ ಬಹಳ ಕಹಿಯಾಗಿರುತ್ತದೆ, ಅಲ್ಲವೆ?

ಶೇರ್ ಅಲಿ : ಸುಲ್ತಾನಾ! ದೇವರಾಣೆಗೂ ಈಗ ನಿಮ್ಮ ಮಾತುಗಳನ್ನು ಸಹಿಸಲು ಸಾಧ್ಯವಿಲ್ಲ!

ಚಾಂದ್‌ಬೀಬಿ : ಹಾಗಾದರೆ ನಿನ್ನ ಖಡ್ಗದ ಹಾಗೆ ನನ್ನ ನಾಲಿಗೆಯೂ ಸಹ ತುಕ್ಕು ಹಿಡಿದಿದೆ ಎಂದುಕೊಂಡಿದ್ದೆಯಾ?

ಶೇರ್ ಅಲಿ : (ಖಡ್ಗ ಎಳೆಯುತ್ತ) ಹಾಗಾದರೆ ನನ್ನ ಖಡ್ಗ ತುಕ್ಕು ಹಿಡಿದಿಲ್ಲವೆಂದು ಈಗಲೇ ತೋರಿಸುತ್ತೇನೆ.

ಚಾಂದ್‌ಬೀಬಿ : (ಕೇಕೆ ಹಾಕುತ್ತ) ವಾಃ! ವಾಃ! ವಾಃ! ಏನು ಧೈರ್ಯ, ಏನು ಶೌರ್ಯ! ಏನು ಗಂಡಸುತನ! ಒಬ್ಬ ಆಯುಧರಹಿತ ಮಹಿಳೆಯ ಮೇಲೆ, ನಿನ್ನನ್ನು ಆಳುತ್ತಿರುವ ಮಹಿಳೆಯ ಮೇಲೆ, ಅವಳು ನಿನ್ನ ಅಧಿಕಾರಿ, ಅವಳದೇ ಉಪ್ಪು ತಿಂದು ಅವಳ ಮೇಲೆಯೇ ನೀನು ಖಡ್ಗ ಎತ್ತುವೆಯಾ! ಅಹ್ಮದನಗರದ ದಂಡಾಧಿಕಾರಿಗಳದು ಇದೇ ವೈಭವವೇ? ಏಕೆ ನಿಂತು ಹೋದೆ? ಸರಿ, ಸರಿ, ದೇವರನಾಮದಿಂದ ಆರಂಭಿಸು! ನೀನೆಂತೂ ಆಫ್ಘಾನಿಸ್ತಾನ ತುರ್ಕಿಸ್ತಾನದವನಲ್ಲವೇ! ನಿನ್ನ ದೇಶ ಅಹ್ಮದನಗರ ಅಲ್ಲತಾನೆ? ಪೂಜ್ಯ ಪೂರ್ವಜರುಗಳ ಗೋರಿಗಳಿಲ್ಲ - ಇಲ್ಲಿ. ಅವರ ರಕ್ತದಿಂದ ಈ ಸಾಮ್ರಾಜ್ಯದ ಆವೆ ಮಣ್ಣು ತಯಾರಿಸಿಲ್ಲ ತಾನೆ!

ಶೇರ್ ಅಲಿ : (ಕೋಪದಿಂದ ಖಡ್ಗ ಅದರ ಕವಚದಲ್ಲಿಡುತ್ತಾ) ದೇವರಾಣೆ, ಹೆಂಗಸನ್ನು ಗೆಲ್ಲಲು ಸಾಧ್ಯವಿಲ್ಲ (ಬಾಗಿಲಿನ ಕಡೆ ತಿರುಗುತ್ತಾನೆ).

ಚಾಂದ್‌ಬೀಬಿ : (ಮೆಲ್ಲ ಮೆಲ್ಲನೆ ಶೇರ್ ಅಲಿಯ ಹತ್ತಿರಕ್ಕೆ ಬಂದು ಅವನ ಹೆಗಲಿನ ಮೇಲೆ ಬಲಗೈ ಇಡುತ್ತಾ) ನೀನು ಧೈರ್ಯವಂತ, ನೀನು ವೀರ. ಯುದ್ಧದ ಮೈದಾನದಿಂದ ಈ ರೀತಿಯಾಗಿ ಹಿಂದಿರುಗುವುದಿಲ್ಲವೆಂದು ನನಗೆ ಭರವಸೆ ಇದೆ. ಸೈನಿಕನ ಕೆಲಸ ಕೇವಲ ಯುದ್ಧ ಮಾಡಿ ಸಾಯುವುದಷ್ಟೆ. ರಾಜಕೀಯ - ಬಾದಷಾ ಮತ್ತು ವಜೀರರ ಕೆಲಸ. ಆದ್ದರಿಂದ ಸಂಧಿಯಾಗುತ್ತದೆಯೋ ಇಲ್ಲವೋ ಅದು ನನಗೆ ಬಿಟ್ಟುಬಿಡು.

ಶೇರ್ ಅಲಿ : (ನಾಚಿಗೆ ಪಟ್ಟು) ನನ್ನನ್ನು ಕ್ಷಮಿಸಿ, ಸುಲ್ತಾನಾ!

ಚಾಂದ್‌ಬೀಬಿ : (ಸಮಾಧಾನಪಡಿಸುವ ರೀತಿಯಲ್ಲಿ) ಇಲ್ಲ, ನಿನ್ನ ಮಾತುಗಳಿಂದ ನನಗೇನು ಬೇಸರವಿಲ್ಲ! ನಾನು ಒಬ್ಬ ಮಹಿಳೆ ಎಂಬುದು ಜ್ಞಾಪಕವಿರಲಿ. ನಿನ್ನಂತಹ ಸಿಪಾಯಿಗಳ ಮೃತ್ಯುವಿನಿಂದ ನನಗೆ ಬಹಳ ದುಃಖವಾಗುತ್ತದೆ. ಆದರೆ.... ನೀನು ನನ್ನ ಮಗನಾಗಿದ್ದಿದ್ದರೂ ಸಹ ದೇವರು ನಿನಗೆ ಯುದ್ಧದ ಮೈದಾನದಲ್ಲಿ ಹುತಾತ್ಮ ಹಾಗೂ ವೀರರ ಸಾವು ನೀಡಲೆಂದು ನಾನು ಭಗವಂತನನ್ನು ಪ್ರಾರ್ಥಿಸುತ್ತಿದ್ದೆ, ಇದು ಸತ್ಯ. ನನ್ನ ಪ್ರೀತಿಯ ದೇಶದ ಕತ್ತಿನಲ್ಲಿ ಗುಲಾಮಗಿರಿಯ ಪಟ್ಟಿ ಹಾಕಿ ನಾವು ನಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು, ಶತ್ರುಗಳ ಮುಂದೆ ಕೈಕಟ್ಟಿ, ತಲೆಬಾಗಿ ನಿಲ್ಲುವಂತಹ ಸಂದರ್ಭ ಬರುವವರೆಗೆ ದೇವರು ನಮಗೆ ಜೀವಂತವಾಗಿರಲು ಬಿಡಬಾರದು.

ಶೇರ್ ಅಲಿ : ಸುಲ್ತಾನ, ಆದ್ದರಿಂದಲೇ ಈಗಲೂ ಸಹ ಮರ್ಯಾದೆಯಿಂದ ಸಂಧಿ ಮಾಡಿ ಕೊಳ್ಳಲು ಅವಕಾಶವಿದೆ ಎಂದು ನಾನು ಹೇಳುತ್ತಿರುವುದು.

ಚಾಂದ್‌ಬೀಬಿ : ನೀನು ಸರಿಯಾಗಿಯೇ ಹೇಳುತ್ತಿದ್ದೀಯೇ. ಆದರೆ ನಿನ್ನ ಮಾತು ನನ್ನ ಗಂಟಲಿನಿಂದ ಇಳಿಯುತ್ತಿಲ್ಲ.

ಶೇರ್ ಅಲಿ : ಶತ್ರುವಿನೊಂದಿಗೆ ಏಕೆ ಸ್ನೇಹ ಮಾಡಬೇಕೆಂಬ ಒಂದು ಸಣ್ಣಮಾತಿಗಾಗಿ ನಮ್ಮ ಸಹಸ್ರಾರು ಪ್ರಜೆಗಳ ಪ್ರಾಣ ಉಚಿತವಾಗಿ ಕಳೆದುಹೋಗುತ್ತಿದೆ, ಸುಲ್ತಾನಾ ಇದರ ಪರಿಣಾಮ? ನೀವು ಮಹಿಳೆ, ನಿಮ್ಮ ಹೃದಯ ನಮ್ಮ ಹೃದಯಕ್ಕಿಂತ ಹೆಚ್ಚು ಮೃದುವಾದುದು. ನೀವೇ ಯೋಚಿಸಿ, ಈ ಮಾತು ಇಂದು ಸಾಧ್ಯವಿದೆ. ಆದರೆ ನಾಳೆ ಸಾಧ್ಯವಿರಬಹುದೆ? ನೀವೇ ಯೋಚಿಸಿ, ನಮ್ಮ ಸೈನ್ಯದಲ್ಲಿ ನೂರಾರು ಜನ ಸತ್ತು ಹೋಗಿರಬಹುದು. ಅವರ ಸೈನ್ಯದಲ್ಲಿ ಸಹಸ್ರಾರು ನವಚೈತನ್ಯ ತುಂಬಿದ ಅಧಿಕ ಸೈನಿಕರು ಸೇರಿರಬಹುದು!

ಚಾಂದ್‌ಬೀಬಿ : (ತಲೆ ಹಿಡಿದುಕೊಂಡು) ಹಾಗಾದರೆ ಸಂಧಿಯೇ ಸರಿ. ಆದರೆ ಮರ್ಯಾದೆ ಯೊಂದಿಗೆ, ಬಾದಷಹರ ಮಧ್ಯೆ ಆಗುತ್ತದೆಯಲ್ಲ ಹಾಗೆ. (ಮಂತ್ರಿ ಜೀತ ಖಾನ್ ಮೆಲ್ಲಮೆಲ್ಲನೆ ಕಾಲಿಡುತ್ತ, ಸದ್ದಿಲ್ಲದಂತೆ ಒಳಗೆ ಬಂದು ಸುಲ್ತಾನಳ ಬೆನ್ನಿನ ಹಿಂದೆ ಬಂದು ನಿಂತುಕೊಳ್ಳುತ್ತಾನೆ).

ಮಂತ್ರಿ : ಎಂತಹ ಸಂಧಿ? ಎಲ್ಲಿಯ ಸಂಧಿ? ನಾನು ಇದನ್ನು ಒಪ್ಪುವುದಿಲ್ಲ.

ಸುಲ್ತಾನ : (ಹಿಂದಿರುಗಿ ಅಡಿಯಿಂದ ಮುಡಿಯವರೆಗೆ ಆವನನ್ನು ನೋಡುತ್ತ ತುಂಬ ತಿರಸ್ಕಾರದಿಂದ ಹೇಳುತ್ತಾಳೆ) ಇದನ್ನು ತಿರಸ್ಕರಿಸುವವನು ನೀವ್ಯಾರು? ಜೀತ?

ಮಂತ್ರಿ : ನಾನು? ಸಾಮ್ರಾಜ್ಯದ ಅಸಲು ಒಡೆಯ! ದಿನವೂ ನಿನ್ನಂತಹ ಮಾಲೀಕಳನ್ನು ಮಾಡುವವನು ಹಾಗೂ ಕೆಡಿಸುವವನು!

ಸುಲ್ತಾನ : ಗುಲಾಮನ ಮಗನೆ ನಿನ್ನ ನಾಲಿಗೆ ತುಂಬ ಉದ್ದವಾಯಿತು?

ಮಂತ್ರಿ : (ಕಠಾರಿ ಎಳೆಯುತ್ತ) ಆದರೆ, ಚಾಂದ್ ನಾನು ನಿನ್ನಂತಹ ಹುಡುಗಿಯರ ಗುಲಾಮನಲ್ಲ, ಮಾಲೀಕ.

ಸುಲ್ತಾನ : (ತಿರಸ್ಕಾರದಿಂದ ಅವನ ಕಡೆಯಿಂದ ಮುಖ ತಿರುಗಿಸಿಕೊಳ್ಳುತ್ತ) ಏನು ಬೊಗಳುತ್ತಿದ್ದಿಯಾ ದುಷ್ಟಾಚಾರಿ! (ಮಂತ್ರಿ ಕೋಪದಿಂದ ಕಠಾರಿಯಿಂದ ಜೋರಾಗಿ ಹಲ್ಲೆ ಮಾಡುತ್ತಾನೆ. ಶೇರ್ ಅಲಿ ಹಾರಿ ಮುಂದೆ ಬಂದು ಹೇಳುತ್ತಾನೆ)

ಶೇರ್ ಅಲಿ : ಏನು ಮಾಡುತ್ತಿದ್ದೀಯ ದುಷ್ಟ!

(ಮಂತ್ರಿಯ ಆಕ್ರಮಣ ಶೇರ್ ಅಲಿಯ ಎದೆ ಮೇಲೆ ಆಗುತ್ತದೆ. ಅವನು ಹಾಯ್ ಎಂದು ಬೀಳುತ್ತಿರುವಾಗ ಚಾಂದ್ ಸುಲ್ತಾನಾ ಅವನನ್ನು ಎರಡು ಕೈಗಳಿಂದ ತಡೆಯಲು ಪ್ರಯತ್ನಿಸುತ್ತಿರುವಾಗ ಜೀತ ಸುಲ್ತಾನಳ ಮೇಲೆ ಎರಡನೆಯ ಸಲ ಪ್ರಹಾರ ಮಾಡುತ್ತಾನೆ. ಚಾಂದ್ ಶೇರ್‌ಅಲಿಯನ್ನು ಬಿಟ್ಟು ಜೀತನ ಮಣಿಗಂಟಿನ ಮೇಲೆ ತನ್ನ ಕೈಯಿಂದ ಹೊಡೆದ ಪರಿಣಾಮವಾಗಿ, ಅವನ ಕೈಯಿಂದ ಕಠಾರಿ ಬಿದ್ದು ಹೋಗುತ್ತದೆ. ಹಬಷಿ ಮಣಿಗಂಟನ್ನು ಹಿಡಿದುಕೊಂಡು ಹೊರಗಡೆ ಓಡುತ್ತಾನೆ. ಶೇರ್‌ಅಲಿ ಜರುಗುತ್ತಾ ಸುಲ್ತಾನಳ ಬಳಿ ಬರುತ್ತಾನೆ.)

ಶೇರ್ ಅಲಿ : (ಗಾಯವನ್ನು ಕೈಯಿಂದ ಹಿಡಿದುಕೊಂಡು ನರಳುತ್ತ) ಆ ಹಬಷಿ ನನ್ನನ್ನು ಹೊಡೆದು ಬಿಟ್ಟ ಸುಲ್ತಾನಾ! (ಆಕ್ರಮಣ ಹಾಗೂ ಆಕ್ರಮಣ ತಡೆಯುವಿಕೆಯ ಕೂಗುಗಳು ಈಗಲೂ ಕೇಳಿಬರುತ್ತಿವೆ.)

ಚಾಂದ್‌ಬೀಬಿ : (ಕುಳಿತುಕೊಂಡು ತನ್ನ ತೊಡೆಯ ಮೇಲೆ ಶೇರ್‌ಅಲಿಯ ತಲೆ ಇಟ್ಟುಕೊಳ್ಳುತ್ತಾಳೆ) ಅರೆ, ನೀನು ನಿನ್ನ ರತ್ನದಂತಹ ಜೀವನವನ್ನು ನನಗೋಸ್ಕರ ಏಕೆ ಕೊಟ್ಟೆ, ಅಯ್ಯೋ ಈ ಕಠಾರಿ ನನ್ನ ಎದೆಯಲ್ಲಿ ಇಳಿದುಬಿಟ್ಟಿದ್ದರೆ ನಾನು ಮೊಘಲರ ಮುಂದೆ ತಲೆ ಬಾಗಿಸುವಂತಹ ಅವಮರ್ಯಾದೆಯಿಂದ ಉಳಿದುಕೊಳ್ಳುತ್ತಿದ್ದೆ!

ಶೇರ್ ಅಲಿ : ಕೇವಲ ಸಂಧಿಯ ಶಕ್ತಿ ಮಾತ್ರ ಅಹ್ಮದ್‌ನಗರವನ್ನು ಈ ಹತ್ಯೆ ಹಾಗೂ ಧ್ವಂಸದಿಂದ ಕಾಪಾಡಬಲ್ಲದು! ಸಂಧಿ- ಕೇವಲ ಸಂಧಿ! ನನಗೆ ಮಾತು.... ಕೊಡಿ.

ಚಾಂದ್‌ಬೀಬಿ : ನಾನು ಮಾತು ಕೊಡುತ್ತೇನೆ. ನೀನು ನನ್ನ ಹಾಗೂ ಅಹ್ಮದ್‌ನಗರದವರ ಸಂರಕ್ಷಕನಲ್ಲವೆ?

ಶೇರ್ ಅಲಿ : ಹಾಗಾದರೆ ನೀವು.... ಈಗಲಾದರೂ ನನ್ನಿಂದ ಸಂತುಷ್ಟರಾಗಿದ್ದೀರಲ್ಲ.

ಚಾಂದ್‌ಬೀಬಿ : ಹೌದು, ಹೌದು. ನಾನು ಸಂತುಷ್ಟಳಾಗಿದ್ದೇನೆ. ನನ್ನ ದೇವರಿಗೂ ಸಹ ಸಂತೋಷವಾಗಿದೆ. (ಕಣ್ಣೀರು ಒರೆಸುತ್ತಾ, ಮುಗುಳುನಗೆ ನಗುತ್ತಾಳೆ) ಈಗ ನಿನ್ನಲ್ಲಿ ಹುತಾತ್ಮರ ರೂಪಲಾವಣ್ಯ ಕಾಣಿಸುತ್ತದೆ.

ಶೇರ್ ಅಲಿ : ಅಲ್ಹಮ್ದುಲಿಲ್ಲಾಹ್ (ದೇವರ ಸ್ತುತಿ) (ಸತ್ತು ಹೋಗುತ್ತಾನೆ.)

## ಎರಡನೆಯ ದೃಶ್ಯ

(ಅರಮನೆಯ ಮೆಟ್ಟಿಲಿನ ಮೇಲೆ ನಿಂತು ಜೀತಖಾನ್ ಭಾಷಣ ಮಾಡುತ್ತಿದ್ದಾನೆ. ಮುಂದೆ ದೊಡ್ಡ ಅಂಗಳದಲ್ಲಿ ಸರ್ದಾರರು, ದಂಡನಾಯಕರು, ಸಿಪಾಯಿಗಳು, ಸೈನಿಕರು ಹಾಗೂ ಸಾರ್ವಜನಿಕರು ನಿಂತಿದ್ದಾರೆ).

ಜೀತಖಾನ್ : ಈಗ ಹೇಳಿದ ಹಾಗೆ ಚಾಂದ್ ಸುಲ್ತಾನ್‌ರವರ ಪರಾಕ್ರಮ, ಜಾಣತನ ಅಥವಾ ಆಡಳಿತದ ಅರ್ಹತೆಯನ್ನು ತಿರಸ್ಕರಿಸುವವರಲ್ಲಿ ನಾನು ಸೇರಿಲ್ಲ. ಹಿಂದೆ ಮುಘಲರು ದಾಳಿ ಮಾಡಿದಾಗ ಅವರು ಒಳ್ಳೆ ಉಪಾಯ ಹಾಗೂ ಧೀಮಂತಿಕೆಯಿಂದ ನಮ್ಮ ಪ್ರೀತಿಯ ನಗರವನ್ನು ಧ್ವಂಸ ಆಗದಿದ್ದ ಹಾಗೆ ಕಾಪಾಡಿದ್ದರು. ಇದು ನನಗೂ ಗೊತ್ತಿದೆ. ನಾನು ಅವರಿಗೆ ಹೃತ್ಪೂರ್ವಕ ಮರ್ಯಾದೆ ಕೊಡುತ್ತೇನೆ. ಇಂದು ಪ್ರಪಂಚದಲ್ಲಿ ಏಳು ಭಾಷೆಗಳ ಜ್ಞಾನ ಉಳ್ಳವರು, ಲೇಖನ ಹಾಗೂ ಖಡ್ಗಧಾರಿಣಿಗಳು, ಅವರಿಗೆ ಅವರ ದೇಶದ ಮೇಲೂ ಪ್ರೀತಿ ಇದೆ. ಆದರೆ ಅಣ್ಣತಮ್ಮಂದಿರೇ, ನನಗೆ ಚಾಂದ್‌ಬೀಬಿಗಿಂತಲೂ ಅಹ್ಮದ್‌ನಗರ ಬಹಳ ಪ್ರಿಯವಾದುದು. ಇಲ್ಲಿ ನಾನು ನೀವು, ಎಲ್ಲರೂ ಹುಟ್ಟಿ ಬೆಳೆದಿದ್ದೇವೆ. ಇಲ್ಲಿಯ ಬೀದಿಗಳಲ್ಲಿ ಆಟವಾಡಿದ್ದೇವೆ. ಬಾವಿ ಹಾಗೂ ಕೆರೆಗಳಲ್ಲಿ ಸ್ನಾನ ಮಾಡಿದ್ದೇವೆ. ಇಲ್ಲಿಯ ಹಸು, ಎಮ್ಮೆಗಳ ಹಾಲು ಕುಡಿದಿದ್ದೇವೆ. ಇಲ್ಲಿಯ ಹೊಲಗಳಲ್ಲಿ ಬೆಳೆಯುವ ಬೆಳೆಗಳಿಂದ ಈ ನಮ್ಮ ದೇಹಗಳು ತುಂಬಿವೆ. ಅದೇ ಅಹ್ಮದ್‌ನಗರದಲ್ಲಿ ಕೇವಲ ಸುಲ್ತಾನರ ಅರಮನೆಯೆ ಅಲ್ಲ, ಬಡವರ ಗುಡಿಸಲುಗಳು ಸಹ ಇವೆ. ಇದರ ಮಣ್ಣಲ್ಲಿ ನಮ್ಮ ಪೂರ್ವಜರ ಮೂಳೆಗಳ ಹುಡಿಯೂ ಸೇರಿದೆ. ಇಂತಹ ಪ್ರೀತಿಯ ಅಹ್ಮದ್‌ನಗರವನ್ನು ಯಾರಾದರೂ ಶತ್ರುಗಳ ವಶಕ್ಕೆ ಕೊಟ್ಟರೆ ನಮ್ಮ ಸ್ಥಿತಿ ಏನಾಗಬಹುದು? ಹೇಳಿ, ಸೋದರರೇ ನೀವು ಇಂತಹ ದ್ರೋಹಿಯೊಡನೆ ಹೇಗೆ ವರ್ತಿಸುವಿರಿ?

ಗುಂಪು : ನಾವು ಅಂತಹವರನ್ನು ಕೊಯ್ದು ತುಂಡು ತುಂಡು ಮಾಡಿ ಕಾಗೆ ಮತ್ತು ಹದ್ದುಗಳಿಗೆ ತಿನ್ನಿಸುವೆವು.

ಜೀತಖಾನ್ : ನೋಡಿ, ಕೋಪ ಹಾಗೂ ಅವಸರದಿಂದ ಕೆಲಸಮಾಡಬೇಡಿ. ಬಾಯಿಂದ ಹೇಳುವುದು ಸುಲಭ. ಆದರೆ ಕಾರ್ಯಗತಮಾಡಿ ತೋರಿಸುವುದು ಕಷ್ಟ. ಆ ದ್ರೋಹಿ ನಿಮಗೆ ಬಹಳ ಆತ್ಮೀಯವಾಗಿರಬಹುದು?

ಗುಂಪು : ಹಾಗಾದರೆ ನೀವು ನಮ್ಮನ್ನು ಪರೀಕ್ಷಿಸಿ ನೋಡಿ. ದೇಶದ್ರೋಹಿ ಎಷ್ಟೊಂದು ಪ್ರತಿಷ್ಠಿತ ವ್ಯಕ್ತಿಯಾಗಿದ್ದರೂ ಸಹ ಅವನೊಂದಿಗೆ ಇದೇ ವ್ಯವಹಾರ ಮಾಡುವೆವು.

ಜೀತಖಾನ್ : ಹೌದು, ಹೌದು, ಆದ್ದರಿಂದಲೇ ಹೇಳಿದ್ದು. ಸುಲ್ತಾನಾ, ಸುಲ್ತಾನಾ, ಬೀದಿ ಬೀದಿ ಎಂದು ಹೇಳುತ್ತಾ ನಮ್ಮ ತುಟಿಗಳು ಒಣಗುತ್ತಿವೆ. ನೀವು ಬೇಗನೆ ನಂಬುವುದಿಲ್ಲ ಎಂದು ನನಗೆ ಗೊತ್ತು. ಆದರೆ ಅಣ್ಣತಮ್ಮಂದಿರೆ, ಏನೇ ಆದರೂ ಮಹಿಳೆ ಮಹಿಳೆಯೇ. ಬಹುಶಃ ವಿಧವಾ ಜೀವನದಿಂದ ಅವರಿಗೂ ಬೇಜಾರಾಗಿರಬೇಕು. ಮುಘಲ್ ರಾಜಕುಮಾರನಿಂದ ಸಂದೇಶವೂ ಬರುತ್ತದೆ ಎಂದು ಕೇಳುತ್ತಿದ್ದೇವೆ. *(ಗುಂಪಲ್ಲಿ ಒಂದು ರೀತಿಯ ಸಂದೇಹದ ಲಕ್ಷಣ ಉಂಟಾಗುತ್ತದ)* ಸಾಧ್ಯವಿರಬಹುದು. ನಾನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ನನ್ನ ಬಳಿ ಯಾವ ಆಧಾರವೂ ಇಲ್ಲ. ಅವರು ತನ್ನನ್ನು ದೆಹಲಿಯ ಮಾಲೀಕಳ (ರಾಣಿ) ಉಡುಪಿನಲ್ಲಿ ಕಲ್ಪಿಸಿಕೊಂಡು ನೋಡುತ್ತಿರಬಹುದು. ಹೌದು, ಸಾಧ್ಯ (ಗುಂಪು ಅಟ್ಟಹಾಸದಿಂದ ಕೇಕೇ ಹಾಕುತ್ತದೆ. ಜೀತ ಕೈ ಸನ್ನೆಯಿಂದ ಅದನ್ನು ತಡೆಯುತ್ತಾನೆ) ಇದು ನಗುವಂತಹ ಮಾತಲ್ಲ. ಅಳುವ ಮಾತು. ಚಾಂದ್‌ಳಂತೂ ತಾನು ಬಯಸಿದಷ್ಟು ಬೆಲೆ ತೆಗೆದುಕೊಳ್ಳುವವಳು. ಇಡೀ ಹಿಂದುಸ್ತಾನದ ಮಾಲೀಕಳಾಗಿ, ರಝಿಯಾ ಸುಲ್ತಾನಳ ಜಾಗ ತೆಗೆದುಕೊಳ್ಳುವುದು, ಇದು ಕಮ್ಮಿ ಬೆಲೆಯೇನೂ ಅಲ್ಲ. ಆದರೆ ನಿಮ್ಮ ಮರ್ಯಾದೆ ಏನಾಗಬಹುದು? *(ಒಬ್ಬೊಬ್ಬರ ಕಡೆಗೂ ಬೆರಳು ತೋರಿ)* ನಿಮ್ಮ ತಾಯಂದಿರ ಗತಿ ಏನಾಗುತ್ತದೆ? ನಿಮ್ಮ ತಂಗಿ ಯಾವ ಮುಘಲ್ ಸಿಪಾಯಿಯ ದಾಸಿಯಾಗುವಳು? ನಿನ್ನ ಹುಡುಗಿ ಯಾರ ಕೈಯಲ್ಲಿ ಅವಮಾನಿತಳಾಗುವಳು? ನಿಮ್ಮ ಪತ್ನಿ ಯಾವ ಶತ್ರುವಿನ ಆಸ್ತಿಯಾಗಬಹುದು? ಯೋಚಿಸಿ, ಯೋಚಿಸಿ - ಇತಿಹಾಸದ ಪುಟಗಳನ್ನು ತಿರುವಿ ನೋಡಿ. ಚಂಗೇಜ್ ಖಾನನೂ, ಹಲಾಕು ಖಾನ್‌ನೂ, ತೈಮೂರನೂ ತಾವು ಜಯಿಸಿದ ದೇಶಗಳ ಮಹಿಳೆಯರೊಂದಿಗೆ ಹೇಗೆ ವರ್ತಿಸಿದರು? ಅವರ ಮಕ್ಕಳಾದ ಮುಘಲರಿಂದ ನೀವು ಯಾವ ಭರವಸೆ ನಿರೀಕ್ಷಿಸುವಿರಿ? ನಿಮ್ಮ ಕೈಯ್ಯಲ್ಲಿ ಖಡ್ಗಗಳಿಲ್ಲವೆ? ನೀವು ದುಷ್ಟರ ತಲೆಯನ್ನು ಚಚ್ಚುವುದನ್ನು ಮರೆತುಹೋದಿರಾ? ಹಾಗೆಯೇ ದ್ರೋಹಿಗಳನ್ನು ಶಿಕ್ಷಿಸುವುದು ನಿಮಗೆ ಗೊತ್ತಿಲ್ಲವೆ?

ಗುಂಪು : ನಮಗೆ ಎಲ್ಲವೂ ಬರುತ್ತದೆ. *(ಖಡ್ಗಗಳನ್ನು ಎಳೆಯುತ್ತಾರೆ)* ನಾವು ಈಗಲೇ ಹೋಗಿ ಆ ದ್ರೋಹಿ ಸುಲ್ತಾನಳ ತಲೆ ಹಾರಿಸಿಬಿಡುತ್ತೇವೆ.

ಜೀತಖಾನ್ : ಹಾಗಾದರೆ ಬನ್ನಿ, ಮುಖ ನೋಡುವ, ಹಾಗೂ ವಿಳಂಬ ಮಾಡುವ ಅವಕಾಶ ಇಲ್ಲ. ಬನ್ನಿ, ಬನ್ನಿ.

ಗುಂಪು : ನಡೆಯಿರಿ, ನಡೆಯಿರಿ, ಹೊಡೆದು ಹಾಕಿ, ತುಂಡುತುಂಡಾಗಿ ಕತ್ತರಿಸಿ. *(ಇಡೀ ಗುಂಪು ದಾಳಿ ಮಾಡುತ್ತಾ ಅರಮನೆಯೊಳಗೆ ನುಗ್ಗುತ್ತದೆ).*

# ಮೂರನೆಯ ದೃಶ್ಯ

*(ಶೇರ್ ಅಲಿ ಕೊಲ್ಲಲ್ಪಟ್ಟ ಜಾಗ, ಸಮೀಪದಲ್ಲೆ ಸಿಂಹಾಸನದ ಬಳಿ ಚಾಂದ್ ಸುಲ್ತಾನಾ ನಿಂತಿದ್ದಾಳೆ. ಆವಳ ಚಹರೆಯಲ್ಲಿ ಚಿಂತೆ ಹಾಗೂ ಗಾಬರಿ ಕಾಣಿಸುತ್ತದೆ. ಒಬ್ಬ ಸೇವಕ ಓಡೋಡಿ ಬಂದು.)*

ಸೇವಕ : *(ಗಾಬರಿಗೊಂಡು)* ಸುಲ್ತಾನಾ ಸರ್ಕಾರ್.

ಚಾಂದ್‌ಬೀಬಿ : ಏನು, ಏಕೆ ಇಷ್ಟೊಂದು ಗಾಬರಿಯಾಗಿದ್ದೀಯ?

ಸೇವಕಿ : ಸರ್ಕಾರ್ ನೂರಾರು ಜನ ಬೆತ್ತಲೆ ಖಡ್ಗಗಳನ್ನು ತೆಗೆದುಕೊಂಡು ಅರಮನೆಯೊಳಗೆ ನುಗ್ಗಿ ಬರುತ್ತಿದ್ದಾರೆ.

ಚಾಂದ್‌ಬೀಬಿ : ಹಾಯ್, ಪಹರೆದಾರರೇನಾದರೂ?

ಸೇವಕಿ : ಸರ್ಕಾರ, ಪಹರೆದಾರರೂ ಸಹ ಅವರ ಜೊತೆ ಸೇರಿಬಿಟ್ಟಿದ್ದಾರೆ. ಬಹುಶಃ ಸರ್ಕಾರಿ....

ಚಾಂದ್‌ಬೀಬಿ : ಅಚ್ಛಾ, ಅವರುಗಳು ನಮ್ಮ ಜನರೇ, ಅವರನ್ನು ಜೀತಖಾನ್ ಪ್ರಚೋದಿಸಿರ ಬಹುದು.

ಸೇವಕಿ : ಹೌದು ಸರ್ಕಾರ್. ಈಗ ಇಲ್ಲಿಂದ ಎಲ್ಲಾದರೂ ಹೊರಟು ಹೋಗುವುದೇ ಸರಿ.

ಚಾಂದ್‌ಬೀಬಿ : *(ಮುಗುಳುನಗೆ ನಕ್ಕು)* ನಾನು ಮುಘಲರ ಅಸಂಖ್ಯಾತ ಸೈನ್ಯದ ಮುಂದೆ ಅಲುಗಾಡಲಿಲ್ಲ. ಈಗ ಅಹ್ಮದ್‌ನಗರದವರಿಗೆ ಹೆದರಿ ಓಡಿ ಹೋಗಲೆ? ಅದೂ ಜೀತಖಾನ್ ಮತ್ತು ಅವನ ಹೇಡಿ ಜೊತೆಗಾರರಿಗೆ ಹೆದರಿ........

*(ಬಾಗಿಲು ದಢಾರಂದು ತೆರೆಯುತ್ತದೆ. ಮತ್ತೊಬ್ಬಳು ಸೇವಕಿ ಗಾಬರಿಯಾಗಿ ಬರುತ್ತಾಳೆ)*

ಎರಡನೇ ಸೇವಕಿ : ಸರ್ಕಾರ್, ಸರ್ಕಾರ್ ಎಲ್ಲಾದರೂ ಮರೆಯಾಗಿ, ದೇವರಾಣೆ ಇಡೀ ಗುಂಪು ನಿಮ್ಮ ರಕ್ತದ ದಾಹಿಯಾಗಿದೆ.

ಚಾಂದ್‌ಬೀಬಿ : ಹೆದರಬೇಡ, ಅವರು ಬರಲಿ *(ಸೆಟೆದು ನಿಲ್ಲುತ್ತಾಳೆ).*

*(ಮೊದಲನೆಯ ಸೇವಕಿ ಓಡಿ ಬಂದು ಸುಲ್ತಾನಳ ಕೈಯಲ್ಲಿ ಖಡ್ಗಕೊಡುತ್ತಾಳೆ. ಅವಳು ಕತ್ತಿಯನ್ನು ಅದರ ಒರೆಯಿಂದ ಎಳೆಯುತ್ತಾಳೆ ಮತ್ತೆ ತಲೆ ಅಲುಗಾಡಿಸಿ ಮುಗುಳುನಗೆ ನಗುತ್ತಾಳೆ. ಖಡ್ಗ ಸೇವಕಿಗೆ ಹಿಂದಿರುಗಿಸಿ)* ಇಲ್ಲ ನಾನು ನಮ್ಮವರೊಡನೆ ಖಡ್ಗದ ಮುಖಾಂತರ ಮಾತಾಡುವುದಿಲ್ಲ.

ಸೇವಕಿ : ಸರ್ಕಾರ್, ಆ ಕೊಲೆಗಡುಕರು ಮಾತಾಡಲು ಬರುತ್ತಿಲ್ಲ.

ಚಾಂದ್‌ಬೀಬಿ : ಹಾಗಾದರೆ ನನ್ನ ಮಾತು ಕೇಳದಷ್ಟು ಹುಚ್ಚರಾಗಿರುವರೇ? (ದಢಾರ್ ಎಂದು ಬಾಗಿಲು ತೆರೆಯುತ್ತದೆ, ಗುಂಪು ಜೀತಖಾನ್‌ನ ಹಿಂದೆ ಹಿಂದೆ ಒಳಗೆ ಪ್ರವೇಶಿಸುತ್ತದೆ)

ಗುಂಪು : ಈ ವಿದ್ರೋಹಿಯನ್ನು ಕೊಂದು ಹಾಕಿ, ಈ ನಾಚಿಕೆ ಇಲ್ಲದವಳನ್ನು ತುಂಡು ತುಂಡಾಗಿ ಕತ್ತರಿಸಿ. (ಚಾಂದ್‌ಬೀಬಿ ಸಿಂಹಾಸನದ ಮೇಲೆ ನಿಂತುಕೊಂಡು ಗದರಿಸಿ)

ಚಾಂದ್‌ಬೀಬಿ : ನಿಲ್ಲಿ, (*ಗುಂಪು ನಿಂತುಕೊಳ್ಳುತ್ತದ*) ನನ್ನ ಕೈಯ್ಯಲ್ಲಿ ಬಂದೂಕು ಇಲ್ಲ, ಸೊಂಟದಲ್ಲಿ ಖಡ್ಗವೂ ಇಲ್ಲ, ನೋಡುತ್ತಿದ್ದೀರಲ್ಲ?

ಜೀತ ಖಾನ್ : ಈ ಜಾದೂಗಾತಿಗೆ ಮಾತಾಡಲು ಅವಕಾಶ ನೀಡಬೇಡಿ.

ಚಾಂದ್‌ಬೀಬಿ : ಗುಲಾಮ ಮಗನೇ ಈ ಎಲ್ಲ ಬೆಂಕಿ ನೀನೇ ಹಚ್ಚಿದ್ದಲ್ಲವೇ? (*ಜೀತ ಖಾನ್ ಬಂದೂಕನ್ನು ಎತ್ತಿ ಹೊಡೆಯುತ್ತಾನೆ. ಗುಂಡು ಎದೆಗೆ ತಾಗುತ್ತದೆ. ಚಾಂದ್‌ಬೀಬಿ ತತ್ತರಿಸಿ ಬಿದ್ದು ಹೋಗುತ್ತಾಳೆ. ಗುಂಪು ಗಾಬರಿಯಾಗಿ ಜೀತಖಾನ್ ಕಡೆ ನೋಡುತ್ತದ*)।

ಜೀತಖಾನ್ : ಈಗಲೂ ನಿಂತು ಮುಖ ನೋಡುತ್ತಿದ್ದೀರ? ಈ ಗಾಯಗೊಂಡ ಹೆಣ್ಣು ಹುಲಿಯನ್ನು ಕೊಂದು ಹಾಕಿ.

ಗುಂಪು : (*ಹೊಡೆಯಿರಿ, ಹೊಡೆಯಿರಿ ಎಂದುಕೊಂಡು ಮಾಲಿಕಳ ಕಡೆ ಹೋಗುತ್ತದೆ. ಅಷ್ಟರಲ್ಲಿ ಮುಫ್ತೀ ಸಾಹೇಬರು ಪ್ರವೇಶಿಸಿ ಗುಂಪನ್ನು ಎತ್ತರ ಧ್ವನಿಯಲ್ಲಿ ಹೆದರಿಸುತ್ತಾರ*).

ಮುಫ್ತಿ : ಏನು ಮಾಡುತ್ತಿದ್ದೀರ ಅತ್ಯಾಚಾರಿಗಳೇ (*ಗುಂಪು ಆ ಸದ್ದನ್ನು ಕೇಳಿ ಸಂಕೋಚಪಟ್ಟು ನಿಂತುಕೊಳ್ಳುತ್ತದ*). ಒಬ್ಬ ಬರಿಗೈಯ್ಯಲ್ಲಿರುವ ಮಹಿಳೆಯ ಮೇಲೆ ಖಡ್ಗಗಳಿಂದ ಹಲ್ಲೆಮಾಡುತ್ತಿದ್ದೀರಲ್ಲ. ನಾಚಿಕೆಯಾಗುವುದಿಲ್ಲವೇ ನಿಮಗೆ? (*ಇಡೀ ಗುಂಪು ಗಾಬರಿಯಾಗಿ ಸ್ವಲ್ಪ ನಾಚಿಕೆಪಡುತ್ತಾ ಹಿಂಜರಿಯುತ್ತದೆ. ಮುಫ್ತೀ ಸಾಹೇಬರು ಗಾಯಗೊಂಡಿರುವ ಸುಲ್ತಾನಳ ಬಳಿ ಹೋಗುತ್ತಾರೆ.*)

ಚಾಂದ್‌ಬೀಬಿ : (*ನರಳುತ್ತಾ*) ಸ್ವಲ್ಪ ಸಹಾಯ ಮಾಡಿ.

ಮುಫ್ತಿ : (*ಸೇವಕಿಯನ್ನು ಕುರಿತು*) ಹಕೀಂ ಸಾಹೇಬರನ್ನು ಕರೆಯಿರಿ. ಶಸ್ತ್ರ ಚಿಕಿತ್ಸಕರನ್ನು ಕರೆಯಲು ಆಳನ್ನು......

ಚಾಂದ್‌ಬೀಬಿ : (*ಕೈ ಸನ್ನೆಯಿಂದ ತಡೆಯುತ್ತಾ*) ಈಗ ಅದೆಲ್ಲ ವ್ಯರ್ಥ.... ಸ್ವಲ್ಪ ನನ್ನ ಕಣ್ಣಿಂದ.... ರಕ್ತ ಒರೆಸಿ (*ಮುಫ್ತಿ ಸಾಹೇಬರು ರುಮಾಲಿನಿಂದ ಮುಖ ರಕ್ತ ಸ್ವಚ್ಛ ಮಾಡುತ್ತಾರೆ*) ಜೀತಖಾನನ ಸ್ನೇಹಿತರೇ, ನೀವು ನನ್ನ ಸಂರಕ್ಷಕರು. ಆದರೆ ನಿಮ್ಮ ಶತ್ರು ನೀವೇ ನನ್ನ ಕಷ್ಟವನ್ನು ನಿವಾರಿಸಿಬಿಟ್ಟಿದ್ದೀರಾ. ನನಗೆ

ಮುಘಲರ ಮುಂದೆ.. ತಲೆ ಬಾಗುವುದರಿಂದ ಕಾಪಾಡಿದ್ದೀರ..... ಆದರೆ ನಿಮ್ಮನ್ನು ನೀವೇ ಮುಘಲರ ಗುಲಾಮರು ಹಾಗೂ ನಿಮ್ಮ ಪುತ್ರಿಯರು, ಪತ್ನಿಯರನ್ನು, ತಾಯಿಯರನ್ನು, ತಂಗಿಯರನ್ನು ಅವರ ಸೇವಕಿಯರನ್ನಾಗಿ ಮಾಡಿದ್ದೀರ....... ದೇವರ ದೊಡ್ಡ ಉಪಕಾರ.... ಅವನು ನಿಮ್ಮ ಕೈಗಳಿಂದ.... ಸಾವು ಕೊಟ್ಟ...... ನಮ್ಮವರ ಕೈಯಿಂದ ಕೊಟ್ಟಿರುವ ವಿಷದ ಬಟ್ಟಲು..... ಶತ್ರುಗಳು ಕೊಟ್ಟಿರುವ ಅಮೃತಕ್ಕಿಂತಲೂ ಹೆಚ್ಚು ಸಿಹಿಯಾಗಿರುತ್ತದೆ. ಕರ್ತಾರನ ಉಪಕಾರ..... ನಿಮಗೆ ಧನ್ಯವಾದ *(ಜನ ತಮ್ಮ ಕೈಗಳಿಂದ ಖಡ್ಗಗಳನ್ನು ಎಸೆದು ಎರಡೂ ಕೈಗಳಿಂದ ತಮ್ಮ ಮುಖಗಳನ್ನು ಮರೆಮಾಡಿಕೊಳ್ಳುತ್ತಾರೆ. ಜೀತ ಮೆಲ್ಲಮೆಲ್ಲನೆ ಕೊಠಡಿಯಿಂದ ಓಡಿ ಹೋಗಲು ಹಿಂದೆ ಸರಿಯುತ್ತಾನೆ.)*

ಚಾಂದ್‌ಬೀಬಿ : ನಾನು ಸಾಮ್ರಾಜ್ಯದ ಎಲ್ಲ ಗುಲಾಮರನ್ನು, ದಾಸಿಯರನ್ನು ಸ್ವತಂತ್ರ ಗೊಳಿಸಿದೆ. ಬಳಿಕ...... ನನ್ನ ಕೊಲೆಗಾರ ಜೀತಖಾನ್ *(ಜನ ಹಿಂದಿರುಗಿ ಕೋಪದಿಂದ ಜೀತನ ಕಡೆ ನೋಡುತ್ತಾರೆ. ಅವನು ಹೆದರಿ ಓಡಿ ಹೋಗುತ್ತಾನೆ)* ಜೀತ ನಾನು ನಿನ್ನನ್ನು ಕ್ಷಮಿಸಿದ್ದೇನೆ.

*(ಹೊರಗಡೆಯಿಂದ ಸ್ಫೋಟದ ಶಬ್ದ ಕೇಳಿ ಬರುತ್ತದೆ. ಎಲ್ಲರೂ ಗಾಬರಿಯಾಗಿ ಒಬ್ಬರನ್ನೊಬ್ಬರು ನೋಡುತ್ತಾರೆ).*

ಆ ಕೋಟೆಯ ಗೋಡೆ .......ಮುರಿದು ಹೋಯಿತು *(ಗದ್ದಲ ಕೇಳಿ ಬರುತ್ತದೆ. ಶಾಭಾಷ್ ವೀರರೇ ಮುನ್ನುಗ್ಗಿ, ನುಗ್ಗೀ ಬಿಡಿ. ಈಗ ನಿಮ್ಮನ್ನು ತಡೆಯಲು ಯಾರೂ ಇಲ್ಲ. ಶಾಭಾಷ್ ವೀರರೇ, ವೀರರೇ ಅಲ್ಲಾಹು ಅಕ್ಬರ್, ಶಸ್ತ್ರಾಸ್ತ್ರಗಳ ಝೇಂಕಾರ, ಸಾಯುವರ ಕೂಗುಗಳು, ಮಹಿಳೆಯರ ಅಳುವ ಶಬ್ಧ ಕೇಳಿ ಬರುತ್ತದೆ.)*

ಚಾಂದ್‌ಬೀಬಿ : (ಹುಚ್ಚಾಬಟ್ಟೆ ಎದ್ದು ನಿಂತುಕೊಳ್ಳುತ್ತಾಳೆ- ಎರಡು ಕೈಗಳನ್ನೂ ಚಾಚುತ್ತಾಳೆ) ಶತ್ರುಗಳು ನುಗ್ಗಿ ಬರುತ್ತಿದ್ದಾರೆ, ದೇಶವನ್ನು ಕಾಪಾಡಿ *(ಕೆಮ್ಮು ಬರುತ್ತದೆ, ತತ್ತರಿಸುತ್ತಾಳೆ)* ಹಾಯ್ ದೇಶ್.... ''ತತ್ತರಿಸಿ ಬೀಳುತ್ತಾಳೆ ದೇಶ್''..........

*(ಶಬ್ಧದ ಧ್ವನಿ ಪ್ರತಿಧ್ವನಿಯಾಗಿ ಕೇಳಿಸುತ್ತದೆ. ಮುಘಲರು ಒಳಗೆ ಬರುವಂತೆ ಕಾಣಿಸುತ್ತದೆ. ಅಹ್ಮದ್ ನಗರದ ನಿವಾಸಿಗಳು ಓಡಲಾರಂಭಿಸುತ್ತಾರೆ. ''ಆಹ್'')*

ತೆರೆ

( ಮುಕ್ತಾಯ )

*   *   *

# ಕನಸುಗಳು

ಹಿಂದಿಮೂಲ : ರಾಮದರಶ್ ಮಿಶ್ರ
ಅನು : ಡಿ. ಎಸ್. ಶ್ರೀನಾಥ್

ನಾನು ತುಂಬಾ ವ್ಯಗ್ರನಾಗಿದ್ದೇನೆ
ಎಲ್ಲಿಂದ ಬರುತ್ತವೆ, ಯಾಕಾಗಿ ಬರುತ್ತವೆ
ಕನಸುಗಳು ಇಷ್ಟೊಂದು ನನ್ನ ಕನಸುಗಳಲ್ಲಿ ತೊಡಕಾಗಿ

ಫ್ರಾಯಿಡ್ ಸಿಕ್ಕಿದರೆ
ಕೇಳುತ್ತಿದ್ದೆ ಕಣ್ಣುಗಳು ಮುಚ್ಚಿಕೊಳ್ಳುತ್ತಲೇ
ಕನಸುಗಳೇಕೆ ಆಕ್ರಮಣ ಮಾಡುತ್ತವೆ
ನನ್ನ ನಿದ್ರೆಯಲ್ಲಿ
ಮತ್ತೆ ಥಕ್ಕನೆ ಹಾರಿಹೋಗುತ್ತಿರುತ್ತವೆ
ಪರಸ್ಪರ ಕಲಬೆರಕೆಯಾಗಿ
ನಿದ್ರೆಯ ಅಂತ್ಯದವರೆಗೆ

ನನ್ನ ಕನಸುಗಳಲ್ಲೇಕೆ
ಸಾಮಾನ್ಯವಾಗಿ ರೈಲು ಹೊರಟಿರುತ್ತದೆ
ಹಳಿಗಳ ಮೇಲೆ ನಾನು ಓಡುತ್ತಿರುತ್ತೇನೆ
ಮತ್ತೆ ಸಿಕ್ಕರೂ ಸಾಮಾನ್ಯವಾಗಿ
ಹಳಿಗಳಿಲ್ಲದೆ ಸಾಗುತ್ತಿರುತ್ತದೆ
ಮರಳಿನಲ್ಲಿ, ಹೊಲಗಳಲ್ಲಿ.......

ಮನುಷ್ಯರ ಮುಖಗಳೇಕೆ
ಭೂತ-ಪ್ರೇತಗಳಂತೆ ಅಥವಾ ಕಾಡುಮೃಗಗಳಂತೆ
ಆಗುತ್ತವೆ
ಮತ್ತೆ ಅವು ಹನುಮಂತನ ಸ್ತೋತ್ರ
ಅಥವಾ ಗಾಯತ್ರಿ ಮಂತ್ರಕ್ಕೂ ಹೆದರದಾಗ

ಭಯದಿಂದಾಗಿ ಅಕಾಶದಲ್ಲಿ
ಹಾರಲಾರಂಭಿಸುತ್ತೇನೆ ನಾನಾಗ
ನಾನೇಕೆ ಹೆದರುತ್ತೇನೆ ಎತ್ತರದ
ಜಾಗಗಳಿಂದ ಕೆಳಗೆ ಬಾಗಿನೋಡಲು
ಬಿದ್ದೆ, ಬಿದ್ದೆ ಎಂದು ಯಾಕೆನಿಸುತ್ತದೆ
ಭಯಾನಕ ಶರೀರದ ದಂತದಾನೆಗಳು
ದೌಡಾಯಿಸಿ ಬರುತ್ತವೆ ನನ್ನೆಡೆಗೆ ಯಾಕೆ
ಕಪ್ಪು ಮೋಡಗಳಂತೆ
ಎಷ್ಟೋ ಪ್ರಯತ್ನಿಸಿದಾಗ್ಯೂ
ಅವುಗಳ ದೃಷ್ಟಿಗೆ ನಾನೇಕೆ ಬೀಳುತ್ತೇನೆ.

ನಾನಿನ್ನೂ ಯಾಕೆ ಪರೀಕ್ಷೆಗೆ ಕೂರುತ್ತೇನೆ
ಒಮ್ಮೆ ಲೇಖನಿ ಸಿಗುವುದಿಲ್ಲ
ಒಮ್ಮೆ ಶಾಯಿ, ಒಮ್ಮೆ ಕಾಪಿ
ಒಮ್ಮೊಮ್ಮೆ ಕಾಗದವೂ ಕಣ್ಮರೆಯಾಗುತ್ತದೆ
ಮತ್ತೆ ಮೂರು ಗಂಟೆ ಕುದಿಯುತ್ತಿರುತ್ತೇನೆ.

ನಾನೇಕೆ ಮತ್ತೆ- ಮತ್ತೆ ಮರಳಿ
ಹೋಗುತ್ತೇನೆ ನಾನು ಬಿಟ್ಟು ಬಂದ ಹಳ್ಳಿಗೆ
ಹಬ್ಬ-ಹರಿದಿನಗಳಲ್ಲಿ
ನನ್ನ ದಿವಂಗತ ತಂದೆ-ತಾಯಿ
ಮಿತ್ರರು, ಗುರುಗಳು ಎಲ್ಲರೂ ಭೇಟಿಯಾಗುತ್ತಾರೆ ಅಲ್ಲಿ
ಮಾತನಾಡುತ್ತಾ
ಆದರೆ ಕೆಲವು ವಿಚಿತ್ರ ಆಕಾರದವರು

ಮತ್ತೆ ಅದೆಷ್ಟೋ ಕನಸುಗಳು
ಮುರಿದ ಕನಸುಗಳು, ಒಂದರ ಮೇಲೆ
ಒಂದು ಹತ್ತಿರುವ ಕನಸುಗಳು
ನಾನು ಕವಿ
ಸುಂದರ ವಸ್ತುವಿಗೆ ಉಪಮೆಯನ್ನು
ಕೊಡುತ್ತೇನೆ ಕನಸುಗಳಿಂದ
ಆದರೆ ನಾನು ಪ್ರತಿಯೊಂದು

ನಿದ್ರೆಯಿಂದ ಎಚ್ಚೆತ್ತ ನಂತರ
ದಣಿದು
ನನ್ನನ್ನೇ ಪ್ರಶ್ನಿಸಿಕೊಳ್ಳುತ್ತೇನೆ-
ಕನಸುಗಳು ಸುಂದರವೂ ಆಗಿರುತ್ತವೆಯೇ?
ಮತ್ತೆ ಯಥಾರ್ಥದ ಮಡಿಲಿನಲ್ಲಿ
ಜಾರಿ ಬೀಳುತ್ತೇನೆ
ಭರವಸೆಯ ಭಾವನೆಗಳಿಂದ

ಫ್ರಾಯಿಡ್ ಆಗಿದ್ದರೆ ಪ್ರಶ್ನಿಸುತ್ತಿದ್ದೆ
ಯಾಕಪ್ಪಾ, ಲಿಬಿಡೋನ ಕ್ರಿಸ್ತ
ಹೇಳು, ಈ ಕನಸುಗಳ ಅರ್ಥವೇನು?
ನೀನು ನನ್ನ ಸುತ್ತಮುತ್ತಲಿನ
ನಾನು ಬಾಲ್ಯದಿಂದ ಗೆದ್ದು ಬಂದ
ಭಯಾನಕ ಯಥಾರ್ಥತೆಯನ್ನು ನೋಡಿರುವೆಯಾ
ಸತ್ತು-ಸತ್ತು
ಮತ್ತೆ ಇಷ್ಟು ದೂರ ಬಂದ ಮೇಲೂ
ಅನ್ನಿಸುತ್ತದೆ-

ಅದು ಏದೇ - ಏದೇ
ಘಟಿಸುತ್ತದೆ ನನ್ನೊಂದಿಗೆ
ನಾನು ನಿದ್ರಿಸಿದರೆ ಅದು ಜಾಗೃತವಾಗುತ್ತದೆ
ನಾನು ಜಾಗೃತನಾದರೆ ಅದು ನಿದ್ರಿಸುತ್ತದೆ.

* * *

# ಮಬ್ಬು ಕವಿದ ಭೂಮಿ

ಇಟಾಲಿಯನ್ ಮೂಲ : ಪೀಟರ್ ರಸ್ಸೆಲ್
ಅನು : ಹೆಚ್. ಕೃಷ್ಣಮೂರ್ತಿ

ಶರತ್ಕಾಲ ಮುಗಿದಿದೆ ಎಲ್ಲ ನಾಯಿಕೊಡೆ (ಅಣಬೆ) ಕೊಳೆತು ನಾರಿವೆ
ಪರಿವೆಯಿಲ್ಲದೆ ನೆಲೆಕಾಣದೆ ಚಳಿಗಾಲ ಶರೀರಗಳು ಸಾಗಿವೆ
ಮರೆತು ಬೇಸಿಗೆ ದೂರವಾದಂತೆ ಅವಕೆ
ವಸಂತಕಾಲ ಸಿಡಿಮುಡಿ ನೆಗೆದಾಡಿವೆ ಹಿಮದೊಳಗೆ ಅವುಗಳ ಮುಂದೆ
ಹಾಗೂ ಕಂಬಳಿಯ ಕನಸುಗಳು  ಹಾದಿ ನೀಡಿವೆ ಹತ್ತಿಯ ಕನಸುಗಳಿಗೆ
ನಿಜವಾಗಿ ಏನೂ ಇರದು ಈ ನೆಲದ ಕೆಳಗೆ
ನನಗೆ ನಾನೇ ಕೇಳುವೆ ಹೇಗೆ ಋತುಗಳು ಹೆರುವವು
ಹಾಗೂ ಹೇಗೆ ಸಸ್ಯಗಳು ಪ್ರಾಣಿಗಳು ಬೆಳೆಯಬಲ್ಲವು

ನಾನು ದಿಟ್ಟಿಸಿ ಕಾಣುವೆ ಕಿಟಕಿಯ ಮೂಲಕ ಮರಗಿಡಗಳು
ಹೊಲ ಗದ್ದೆಗಳು ಹಾಗೂ ಹಿಂಡು ಕುರಿಗಳು ದೂರಬೆಟ್ಟಗಳು
ಹಾಗೂ ಗಿರಣಿ. ನಾನು ಆಲಿಸುವೆ ಕುರುಬರ ಕರೆ
ಅವರ ಬೊಗಳುವ ನಾಯಿಗಳು..... ಎಲ್ಲ  ಗಳಿಕೆ ಅವರ ಜೀವನೋಪಾಯಗಳು
ನಾನು ಮೂಸುವೆ ಹಾಸು ಹುಲ್ಲು ಹಾಗೂ ಸೇವಿಸುವೆ ಗಾಳಿ ಅದು ತಂಪು.....
ಆದರೆ ಮಬ್ಬು ಕವಿದ ಆಸ್ಪತ್ರೆ ಭೂಮಿಯಿಂದ

* * *

# ಅವ್ವ

ಉರ್ದು ಮೂಲ : **ಮೆಹಮೂದ್ ಸಯೀದ್**
ಅನು : **ಶಶಿಕಲಾ ವೀರಯ್ಯಸ್ವಾಮಿ**

ಅವ್ವಾ,
ನೀ ಕಂಡ ಕನಸು ಕರಗಿತಲ್ಲ
ನಿನ್ನೆದೆಯ ನಂದನದಿ ಚೈತ್ರ ಕಾಲಿಡಲಿಲ್ಲ.
ಬದುಕಿಡೀ ಪ್ರಾರ್ಥನೆಯಿತ್ತು ನಿನ್ನ ತುಟಿಗಳಲ್ಲಿ
ಆದರೂ ನಿಷ್ಕರುಣಿ ದೇವರಿಗೆ
ನಿನ್ನ ಮನವಿಯ ತಾಪ ತಾಗಲಿಲ್ಲ
ಕತ್ತಲೆಯ ಕಾವಳದ ನಿನ್ನ ಹಣೆಬರಹವು
ಇಂದು ಕಗ್ಗತ್ತಲಾಯಿತಲ್ಲ
ಸುಖ-ಶಾಂತಿಗಳಚ್ಚಿನಲಿ ನಿನ್ನ ಬದುಕು ಪಡಿಮೂಡಲಿಲ್ಲ
ನಿನ್ನ ನಿರೀಕ್ಷೆಯ ಕಣ್ಣುಗಳಿಗೆ ಸಿಗಲಿಲ್ಲ ಸಂತೃಪ್ತಿ
ಮುಡಿಗೇರಲಿಲ್ಲ ಆಶೆಯ ಬಳ್ಳಿಯಲಿ ಬಿರಿದ ಭಾವಕುಸುಮ
ವಿಷಾದಮಯ ನಕ್ಷತ್ರಖಚಿತ ಆಗಸದ ಕೆಳಗೆ
ಉರಿಯುತಿದೆ ನೋಡು ನಿನ್ನ ಈಡೇರದಾಶೆಗಳ ಚಿತೆಯು
ನಿರ್ಜನ ನೀರವತೆಯಲಿ ಸುಯ್ಯಿಡುವ ಅನಾಥ ಗಾಳಿಯಂತೆ
ಕಂಪಿಸುತಿದೆ ನಿನ್ನ ನಿಟ್ಟುಸಿರು
ಇಡೀ ರಾತ್ರಿ ಗೋಡೆ-ಗೋಡೆಗಳ ಜೊತೆಗೆ
ಗುಟ್ಟುಗಳಲಿ ಬಿಚ್ಚಿಕೊಳುತ ಅಪ್ಪಿಕೊಳ್ಳುವೆ ನೀನು ಏಕಾಂತವ

ಅವ್ವಾ,
ನಮಗೋಸುಗವೆ ಕಂಬನಿಯ ಸುರಿಸದಿರು ನೀನೊಬ್ಬಳೇ
ನಮ್ಮ ನೋವುಗಳಿಗೆ ಮದ್ದು ಸಾವುಗಳೇ.
ನಿನ್ನ ದುಃಖವನುಸುರದಿರು

ಮಾತು ಬಾರದ ಚಂದ್ರತಾರೆಯರಿಗೆ
ನೆತ್ತರು ಬಸಿದು ನೀ ಬೆಳೆಸಿದಾ ನಂದನದಿ
ಕಾಲಿಡಲು ಸ್ಥಳವಿಲ್ಲ ಮುಳ್ಳಿಡಿದ ಕಂಟಿಗಳು
ನಿನ್ನ ಬಯಕೆಯ ತೋಟ ಕೊನೆವರೆಗೆ ಬೀಳು
ಫಲವ ಬಿಡಲಿಲ್ಲ ನಿನ್ನ ಶ್ರಮ ಯತ್ನಗಳು
ದುಃಖಿಗಳು ನಿನ್ನ ಕರ್ಮಫಲವೆನ್ನದಿರು
ಕ್ರೂರಿಯಲ್ಲ ಬರಿ ದೇವರು ಇರುವರಿನ್ನು ಅನೇಕರು

ಅವ್ವಾ,
ಹೇಗೆ ಹೇಳಲಿ ನಾ ನಿನಗೆ
ಆ ದೇವರಲ್ಲದೆಯೆ ಈ ಇವರು
ಗಳಿಗೆಗೊಂದು ಬಣ್ಣ ಬಳಿವ
ಈ ಜಗದ ದೇವರು ಇವರನೇಕರು.

* * *

# ಬಲಿದಾನ

ಉರ್ದು ಮೂಲ : ಏಜಾಜ್ ಅಹಮದ್

ಅನು : ಶಶಿಕಲಾ ವೀರಯ್ಯಸ್ವಾಮಿ

೧

ನನ್ನೆದುರು ನೀನಿಲ್ಲವಿಂದು
ನನ್ನ ನೆನಪಿನ ಎಲ್ಲ ಮೂಲೆಮೂಲೆಗಳಿಂದ
ನಿನ್ನ ಭಾವಚಿತ್ರದ ಒಂದೊಂದು ರೇಖೆಗಳನು
ಅಳಿಸಿಹಾಕಿ ಬಿಡುವೆನು
ಕಣ್ಣೆವೆಗಳಂತೆ ಕೋಮಲವಾದ ಆ ರೇಖೆಗಳು
ಬೆಳಗುವ ಅಂಡಾಕಾರ ಮೊಗದಂತೆ
ಬಾದಾಮಿಯಂಥ ಕಣ್ಣುಗಳಂತೆ ಚೆಲುವಾಗಿವೆ
ಈ ರೇಖೆಗಳು ನನಗೆ ನಿನ್ನ ಪ್ರಿಯ ಇಡುಗಂಟಾಗಿವೆ
ಎಲೆ ಮತ್ತು ರಸಭರಿತ ಹಣ್ಣುಗಳಿಂದ ತೊನೆವ
ಮಲ್‌ಬರಿಯ ರೆಂಬೆಯಂತಿರುವ
ಈ ರೇಖೆಗಳನು,
ಒಂದು ದಿನ ಪದ್ಯಗಳ ಒಡಲಲ್ಲಿ ಮಡಚಿ
ನಿನಗೇ ಮರಳಿಸುವೆ ನಾನು

೨

ನನ್ನೆದುರು ನೀನಿಲ್ಲವಿಂದು
ಪ್ರಜ್ಞೆಯಾಚೆಯ ಅತೀತ ಭಾವವೊಂದು
ಹೇಳುತಿದೆ ನನಗಿಂದು
ಬರಿ, ದುರ್ದೈವಿ ಬರಿ
ಲೇಖನಿಯ ಮಸಿಯಲ್ಲಿ
ಪ್ರೇಮಸ್ಮೃತಿಗಳ, ನಿದ್ರಾಹೀನ ರಾತ್ರಿಗಳ

ಆರ್ತಮನದ ವ್ಯಥೆಯ ಕಥನವನು
ಮತ್ತೆ ಬಣ್ಣಿಸು ನೋವಿನ ರುಚಿಯನು
ಶಬ್ದ ಖಜಾನೆಯನೊಡೆದು
ಲೇಖನಿ ಪಡೆಯಲಿ ಭವ್ಯತೆಯನು

೩

ನನ್ನ ನೋಟದಲಿ ಇಂದು ಸಹ ಆಹ್ವಾನಗಳಿವೆ
ಸುಡುಸುಡುವ ಒಂದು ಪೊದೆಯಂತೆ
ಹೊಲದ ಮೇಲಾಡುವ ಒಂದು ಮಂಜಿನ ತೆರೆಯಂತೆ
ಎಲ್ಲ ನಶ್ವರವು ನನ್ನುಸಿರಿನಂತೆ,
ನಿನ್ನ ಕೆನ್ನೆಯಮೇಲೆ ಉಜ್ವಲವಾದ ಬೆಳಕೊಂದು
ಹರಿವ ಕಂಬನಿಯಾಗಿ ನನ್ನ ಸ್ಮೃತಿಯಲೀಗ ಸಿಲುಕಿರುವದು
ಚರಕದಲ್ಲಿ  ನೂಲುತಿರುವ
ನಾರಿಯ ಸಹನೆಯಂತಿರುವ
ಈ ನೋವು ಗೂಡುಗಳು
ಅನಂತ ಕಾಲದಿ ದಾರಿಗಳ ಇಕ್ಕೆಲದಿ
ನನ್ನ ಸಮ್ಮುಖದಲ್ಲಿ ಸ್ತಬ್ಧ ಮರಗಳ ತೆರದಿ
ನಿಂತಿವೆ ಸಾಲು-ಸಾಲುಗಳಲ್ಲಿ
ತಮ್ಮ ಕತೆಗಳ ತೋಡಿಕೊಳ್ಳುವ, ನಿರೀಕ್ಷೆಯಲ್ಲಿ

* * *

# ಸಮಯವಿಲ್ಲ

ಇಂಗ್ಲಿಷ್ ಮೂಲ : **ರಿಚರ್ಡ್ ಬೇವಿನ್** (೧೫ ವರ್ಷ)
ಅನು : **'ಸಿಸು' ಸಂಗಮೇಶ**

- ಪಂಡಿತರೆ, ಸ್ವಲ್ಪ ಬೀದಿಯನ್ನು ದಾಟಿಸುವಿರಾ?
"ನೀಸು ನನ್ನ ಧರ್ಮದವಳಲ್ಲ ಅಜ್ಜಿ"
- ತಮ್ಮಾ, ಸ್ವಲ್ಪ ಬೀದಿಯನ್ನು ದಾಟಿಸುವಿಯಾ?
"ಸುಮ್ಮನಿರು ಮುದುಕಿ?"
- ದೇಶಭಕ್ತರೆ, ಸ್ವಲ್ಪ ಬೀದಿಯನ್ನು ದಾಟಿಸುವಿರಾ?
"ನಾನು ನಿಮ್ಮ ಪಾರ್ಟಿಯವನಲ್ಲ ಮುದುಕಿ, ಕ್ಷಮಿಸು"
- ಮಂತ್ರಿಗಳೆ, ಸ್ವಲ್ಪ ಬೀದಿಯನ್ನು ದಾಟಿಸುವಿರಾ?
"ಮುಚ್ಚುಮರೆ ಇಲ್ಲದೆ, ಹಕ್ಕಿನಿಂದ ಪ್ರಾಮಾಣಿಕತೆಯಿಂದ ಹೇಳುವೆ ಸಾಧ್ಯವಿಲ್ಲ!"
- ಉಪಾಧ್ಯಾಯರೆ, ಸ್ವಲ್ಪ ಬೀದಿಯನ್ನು ದಾಟಿಸುವಿರಾ?
"ಇನ್ನೂ ಲೆಕ್ಕಬಿಡಿಸುವುದು ಮುಗಿದಿಲ್ಲ ದೇವಿ?"
- ಸಿಪಾಯಿ, ಸ್ವಲ್ಪ ಬೀದಿಯನ್ನು ದಾಟಿಸುವೆಯಾ?
"ಇನ್ನೂ ಹತ್ತುಗಂಟೆಯಾಗಿಲ್ಲ ಅಜ್ಜಿ!"
- ಮಗು, ಸ್ವಲ್ಪ ಬೀದಿಯನ್ನು ದಾಟಿಸುವಿಯಾ?
"ನಿನಗೆ ಕಾಲುಗಳಿಲ್ಲವೇ?"
- ದಯಾಳುಗಳೇ ಯಾರಾದರೂ ಬೀದಿಯನ್ನು ದಾಟಿಸುವಿರಾ?
"ನಿನ್ನ ಮೇಲೆ ದಯೆ ಇದೆ ಅಜ್ಜಿ- ಆದರೆ ಸಮಯವಿಲ್ಲ."
- ಸೂರಾದಾಸರೆ (ಕುರುಡ), ನೀವಾದರೂ ಬೀದಿಯನ್ನು ದಾಟಿಸಬಲ್ಲಿರಾ?
"ಬಾ ತಾಯಿ- ಸಂತೋಷದಿಂದ ದಾಟೋಣ, ಕೈಹಿಡಿ."

* * *

ಮಕ್ಕಳೂ ವಿಚಾರಪೂರಿತ ಭಾವಗೀತೆಗಳನ್ನು ರಚಿಸಬಲ್ಲರು. ಲಂಡನದಲ್ಲಿಯ ಮಕ್ಕಳು ಬರೆದ ಎರಡು ಕವಿತೆಗಳನ್ನು ಇಲ್ಲಿ ಸಾದರಪಡಿಸಿದೆ. ಇವು ಅಲ್ಲಿಯ ಮಕ್ಕಳ ಕವಿತಾ ಸ್ಪರ್ಧೆಯಲ್ಲಿ ಬಹುಮಾನ ಪಡೆದವು. ಭೂಮಿ-ಸೀಮೆಗಳಲ್ಲಿ ಅಂತರವಿದ್ದರೂ ಭಾವನೆಗಳಲ್ಲಿ ಅಂತರವಿಲ್ಲದುದನ್ನು ಕಾಣಬಹುದು.

# ಶಾಂತಿ

ಇಂಗ್ಲಿಷ್ ಮೂಲ : ಆರ್ಥರ್ ಡಾಸನ್ (೯ ವರ್ಷ)
ಅನು : 'ಸಿಸು' ಸಂಗಮೇಶ

ಇಲ್ಲಿ ಲಂಡನದಲ್ಲಿ
ಶಾಂತಿಯ ಅರ್ಥ:

ಆಗಾಗ್ಗೆ ನಮ್ಮ ಗುರುಗಳು ವರ್ಗಗಳಲಿ
ನಮಗೆ ಸುಮ್ಮನೆ ಕೂಡಲು ಹೇಳುತ್ತಿದ್ದರು.

ಆದರೆ ಹಳ್ಳಿಯಲಿ
ಶಾಂತಿಯ ಅರ್ಥ :

ಹಳ್ಳಿಯಲ್ಲಿ ಕಾಲಿಡುತ್ತಲೆ
ಯಾವುದು ನಿಮ್ಮ ಲಕ್ಷ್ಯ ಸೆಳೆಯುವದೊ
ಹಳ್ಳಿಯ ಪೂರ್ತಿ ಪರಿಚಯ ಮಾಡಿಕೊಡುವದೊ
ಅದೇ ಶಾಂತಿ.

ಅಡೆ ತಡೆಗಳಿಲ್ಲದೆ – ಅಂಜಿಕೆ ಇಲ್ಲದೆ
ಆನಂದದಿಂದ ಹಾಡುವ ಹಕ್ಕಿಗಳ ಚಿಂವ್! ಚಿಂವ್!!
ಕೊಂಬೆ-ರೆಂಬೆಗಳ ಮಸೆದಾಟದ ಚೀರ್! ಚೀರ್!!
ಗಾಳಿಯ ಸುಳಿದಾಟದ ಸುಂಯ್! ಸುಂಯ್!!
ಎಲ್ಲ ಧ್ವನಿಗಳ ಸಂಗಮದ ಸುಮಧುರ ಸಂಗೀತ

ನಿಲ್ಲು – ಕೇಳು
ಎಂಥ ಮಧುರ ಗಾನವಿದೆ.

ನಾನು ಕೂಗುವೆ
ನನ್ನ ಬಾಯಿಯಿಂದ ಹೊರಟ ಧ್ವನಿ

ದೂರ ಹೋಗಗೊಡದೆ
ಮರವು ತನ್ನದನ್ನಾಗಿ ಮಾಡಿಕೊಳ್ಳುತ್ತದೆ
ತನ್ನ ಸಂಗೀತದ ಸ್ವರವನ್ನಾಗಿಸಿಕೊಳ್ಳುತ್ತದೆ
ನನ್ನ ದನಿಯನ್ನು ಕದ್ದು ಕುಡಿದು
ಮರವು ಮತ್ತಿನಿಂದ ತೂಗುತ್ತಿದೆ
ನನಗೆಷ್ಟು ಸಂತಸ
ನಾನದಕ್ಕೆ ಧ್ವನಿಕೊಟ್ಟೆ.

ಇಲ್ಲಿ ಲಂಡನದಲ್ಲಿ
ನನ್ನ ಧ್ವನಿ ಬಹಳ ಕರ್ಕಶವಾಗುತ್ತದೆ
ನನ್ನ ಧ್ವನಿ ಬಿಕ್ಕುತ್ತದೆ
ನನ್ನ ಧ್ವನಿ ದೂರದೂರದವರೆಗೆ ತಿರುಗುತ್ತದೆ
ಯಾರೂ ಅದನ್ನು ಸ್ವೀಕರಿಸುವುದಿಲ್ಲ
ನನ್ನ ಧ್ವನಿ ಎಷ್ಟು ಸಣ್ಣವಾಗಿದೆ
ಇದನ್ನು ಯಾರೂ ಲಕ್ಷಿಸುವುದಿಲ್ಲ.

* * *

# ಏಡಿಗಳು

ಮರಾಠಿ ಮೂಲ : ಅರುಣ್ ಕಾಲೇತ್ಕರ್
ಅನು : ಪ್ರೊ॥ ದೊಡ್ಡರಂಗೇಗೌಡ

ನೋಡು ನೋಡು
ನೋಡು ಸಹೃದಯ ಅವುಗಳತ್ತ ಸುಮ್ಮನೆ ನೋಡು

ಏಡಿಗಳು-ನಿನ್ನೆದುರು ಜೋಡಿ ಏಡಿಗಳು !

ಕಾಯುತ್ತಿವೆ ಒಂದೇ ಸಮನೆ
ಯಾರನ್ನ? ಎಂದು ನೀ ಕೇಳಿದರೆ
ನಿನ್ನನ್ನಲ್ಲದೆ ಇನ್ನಾರನ್ನ?

ಹೇಗೆ ನೋಡುತ್ತಿವೆ ನೋಡು ನಿನ್ನನ್ನೇ
ಹಿಡಿಯಲಾರೆ ನೀನು ಅವುಗಳನ್ನ
ಕೊನೇ ಪಕ್ಷ - ಮಿಟುಕಿಸಲಾರೆ!

ಒಂದೀ ಕಡೆ
ಒಂದಾ ಕಡೆ
ನೂರರವತ್ತು ಡಿಗ್ರಿ ಕೋನದಲ್ಲಿ
ನಿನ್ನ ಎಡಕ್ಕೆ!.... ನಿನ್ನ ಬಲಕ್ಕೆ!

ತಿನ್ನಲಿವೆ ನಿನ್ನ ಕಣ್ಣುಗಳನ್ನೇ
ಇರಿಸು ಮುರಿಸಾಯಿತೇನು ನಿನಗೆ?
ಆಗಬೇಕಿಲ್ಲ ತಮ್ಮಾ ಗೊತ್ತೇ ನಿನಗೆ?
ಈಗಿಂದೀಗಲೇ ಅವು ನಿನ್ನ ತಿನ್ನುವುದಿಲ್ಲ!

ಆದರೆ..... ಇಂದೋ ನಾಳೆಯೋ
ಎಂದಾದರೊಂದು ದಿನ

ಕೊನೆಗೆ ಹತ್ತು ವರುಷದ ಮೇಲಾದರೂ
ತಿನ್ನುತ್ತವೆ ನಿನ್ನ..... ಯಾರು ತಾನೆ ಇಲ್ಲ ಎಂದು ಹೇಳಿಯಾರು?

ಯಾವ ಅವಸರವಿಲ್ಲ ಏಡಿಗಳಿಗೆ
ಸಾಕಷ್ಟು ಸಮಯವಿದೆ ಅವುಗಳಿಗೆ

ಊಟವಿಲ್ಲದೆ ಇರಬಲ್ಲವು
ಎನಿತೆನಿತೋ ಕಾಲ-
ಗೊತ್ತೇ ನಿನಗೆ, ಈ ರಹಸ್ಯಮೂಲ?

ನೋಡು ನೋಡಿಲ್ಲಿ ಬೇಗಬೇಗ
ತಲೆ ತಿರುಗಿಸಬೇಡ
ನಿನ್ನ ಕಣ್ಣಗುಡ್ಡೆ ತಿರುಗಿಸಿದರಷ್ಟೇ ಸಾಕು!

ಕಾಣುತ್ತಿದೆಯೋ ಏಡಿ, ಅಲ್ಲಿ?
ಸಂಪೂರ್ಣ ಕಾಣುತ್ತಿಲ್ಲ ಅಲ್ಲವೇ?
ಆದರೆ ಒಂದಿಷ್ಟಾದರೂ ಕಂಡಿರಬೇಕಲ್ಲಾ?
ಚಲಿಸುವುದಾದರೂ ಗೊತ್ತಾಯಿತೇ ನಿನಗೆ?

ಈಗ ನೋಡು, ನೋಡಯ್ಯ ಬೇರೆಡೆ
ಅಲ್ಲ, ಅಲ್ಲ, ಹಾಗಲ್ಲ, ಸಂಪೂರ್ಣ ತಲೆಯನ್ನಲ್ಲ!
ನಾ ಹೇಳಿದಂತೆ, ಕಣ್ಣಗುಡ್ಡೆಗಳನಷ್ಟೇ ಚಲಿಸು

ನೀನೀಗ ನೋಡುತ್ತಿರುವುದು
ಚುರುಕ ಚಿಮ್ಮಟಗಳನ್ನ!
ಈಟಿಯಂಥ ಇಕ್ಕಳಗಳನ್ನ!
ನೀನಿನ್ನೂ ನೋಡಿಲ್ಲವಯ್ಯಾ ಅಣ್ಣಯ್ಯಾ
ಸಂಪೂರ್ಣ ಏಡಿಯಾಕಾರ ನೀನೋಡಿಯೇ ಇಲ್ಲಯ್ಯ!

ಖಂಡಿತಾ ನೀ ನೋಡುವೆ ನಿಜ ಏಡಿಗಳನ್ನ
ಮಾಡುತ್ತವೆ ಅವು ತಮ್ಮ ಪಾಡಿಗೆ ತಮ್ಮ ಕೆಲಸವನ್ನ

ನೀ ಕಲಿಯಬೇಕಾಗಿದೆ ಓ! ಸಹೃದಯ
ಏನನ್ನಲ್ಲದಿದ್ದರೂ ಅವುಗಳಿಂದ ತಾಳ್ಮೆಯ!

ಆ ಏಡಿಗಳು ಬೇರೆ ಯಾವೋ ಅಲ್ಲ, ನಿನಗೆ ಸಂಬಂಧಿಸಿದವೇ;
ನಿನ್ನವೇ.... ! ಬೇರೆ ಯಾರದೋ ಕಣ್ಣುಗಳ
ತಿನ್ನಲು ಬಂದವಲ್ಲ; ಇನ್ನೊಬ್ಬರ ತಿನ್ನುವುದೂ ಅವುಗಳಿಗೆ ಬೇಕಿಲ್ಲ !
ಅಯ್ಯಾ ಆತ್ಮೀಯ ಸಹೃದಯ
ಅವು ನಿನ್ನ ತಲೆಯಿಂದಲೇ ಮೂಡಿದವುಗಳಯ್ಯಾ !

ಎಲ್ಲಿಂದಲೋ ಬಂದವೆಂದು ಬಗೆದೆಯಾ?
ಹೇಗೆ ಬೆಳೆದಿವೆ ನೋಡು, ಪುಷ್ಟವಾಗಿ !

ನೋಡು ನೋಡಯ್ಯಾ ದೊಡ್ಡ ಏಡಿಗಳು
ಆ ದಢೂತಿ ಏಡಿಗಳು ಹುಟ್ಟಿದಂದಿನಿಂದ
ನಿನ್ನ ತಲೆಯಿಂದ ಉದಿಸಿದ ಏಡಿಗಳು
ಕಾಯುವ ಆಟವಾಡುತಿವೆ ಕಾಣಯ್ಯಾ !

ನಿನ್ನ ಕಣ್ಮುಂದೆ ಬರುತ್ತವೆ
ನೀ ಬಯಸಿದ ಘಳಿಗೆ....
ಕಾಯುತ್ತವೆ ಸುಮ್ಮನೆ
ಎಂದೆಂದೂ ನಿನ್ನನ್ನೇ

ನಿನ್ನೊಂದು ಆಜ್ಞೆಗಾಗಿ.....
ಮಾಡಬೇಕಾದ್ದಿಷ್ಟೇ.... ವಚನ ಕೊಡು ನೀನು
ನಿನ್ನ ಕಣ್ಣುಗಳ ಪೂರ್ಣ ತಿಂದ ಮೇಲೆ
ಅವುಗಳ ಕೆಲಸವಾಯಿತೆಂದು ತಿಳಿ.
ಅಲ್ಲಿಂದ ಮುಂದೆ ಎಂದೂ ನೀ ನೋಡಲಾರೆ ಅವುಗಳನ್ನು !

* * *

ಮರಾಠಿಯ ಮುಖ್ಯ ಕವಿ ಅರುಣ್ ಕಾಲೇತ್ಕರ್. ೧೯೩೨ರಲ್ಲಿ ಜನಿಸಿದ ಅರುಣ್ ಕಾಲೇತ್ಕರ್ ಮುಂಬಯಿಯಲ್ಲಿ ವಿದ್ಯಾಭ್ಯಾಸ ಮಾಡಿದವರು; ೧೯೭೭ರಲ್ಲಿ "ಜೇಜೂರಿ" ಕೃತಿಯನ್ನು ರಚಿಸಿ ಪ್ರಖ್ಯಾತರಾದರು; "ಜೇಜೂರಿ" ಕೃತಿಗೆ "ಕಾಮನ್‌ವೆಲ್ತ್ ಕಾವ್ಯ ಪ್ರಶಸ್ತಿ" ದೊರೆತಿದೆ.

# ಮಲೆಯಾಳಂನ ದಿಟ್ಟ ಕವಯತ್ರಿ ಕಮಲಾದಾಸ್

ಮಲಯಾಳಂ ಮತ್ತು ಇಂಗ್ಲೀಷಿನಲ್ಲಿ ಬರೆವ ಕವಯತ್ರಿ ಕಮಲಾದಾಸ್ ತಮ್ಮ ದಿಟ್ಟತನದ ಬರಹಕ್ಕೆ ಹೆಸರಾದವರು. ೧೯೩೪ರಲ್ಲಿ ಮಲಬಾರಿನ ಪುಣ್ಣಯಾರ್‌ಕುಲಾಂನಲ್ಲಿ ಜನಿಸಿದ ಕಮಲಾದಾಸ್ ಸ್ವತಃ ಮನೆಯಲ್ಲೇ ಓದಿ ವಿದ್ಯಾವಂತರಾದವರು. ಆಕೆಯ ಮುಖ್ಯ ಕಾವ್ಯಕೃತಿಗಳು: ಕಲ್ಕತ್ತಾದಲ್ಲಿ ಬೇಸಗೆ (೧೯೩೪); ದಿ ಡಿಸಿಡೆಂಟ್ಸ್ (೧೯೬೫); ದಿ ಓಲ್ಡ್ ಪ್ಲೇ ಹೌಸ್ ಮತ್ತು ಇತರ ಪದ್ಯಗಳು (೧೯೭೩); ಆಯ್ದ ಕವಿತೆಗಳು (೧೯೮೪); ಗದ್ಯ-ನನ್ನ ಕಥೆ (ಆತ್ಮಕಥೆ) ೧೯೭೫;

ಕಾದಂಬರಿ : ಅಲ್ಫಬೆಟ್ ಆಫ್ ಲಸ್ಟ್ (೧೯೭೬)

: ಎ ಡಾಲ್ ಫಾರ್ ದಿ ಚೈಲ್ಡ್ ಪ್ರಾಸ್ಟಿಟ್ಯೂಟ್

ಇವುಗಳಷ್ಟೇ ಅಲ್ಲದೆ - ಮಲೆಯಾಳಂನಲ್ಲೂ ಆಕೆ ಅನೇಕ ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ೧೯೬೯ರಲ್ಲಿ ಅತ್ಯುತ್ತಮ ಕಥಾಸಾಹಿತ್ಯಕ್ಕಾಗಿ 'ಕೇರಳ ಸಾಹಿತ್ಯ ಅಕಾಡೆಮಿ ಪ್ರಶಸ್ತಿ' ಪಡೆದಿದ್ದಾರೆ. ಜೊತೆಗೆ ೧೯೮೧ರಲ್ಲಿ ತಮ್ಮ ಆಂಗ್ಲ ಕಾವ್ಯಕೃತಿಗಾಗಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದ್ದಾರೆ.

* * *

# ಕಾಡು ಬೋಗನ್‌ವಿಲ್ಲಾ

ಮಲಯಾಳಂ ಮೂಲ : **ಕಮಲಾ ದಾಸ್**
ಅನು : **ಪ್ರೊ॥ ದೊಡ್ಡರಂಗೇಗೌಡ**

ಕಲ್ಕತ್ತಾದಲ್ಲಿ ನಾನು ದುಃಖಿತಳಾದ-
ಕಾಲವೊಂದಿತ್ತು, ಅಂಥ ವೈಶಾಖದ ದಿನಗಳು
ಕೊನೆಗೂ ಸರಿದವು ಮೆಲ್ಲಮೆಲ್ಲನೆ;

ಮಂಕು ಕವಿದಂತೆ ......
ಶಿದಿಗೆ ಹಿಂದೆ ನಡೆವ ಶೋಕತಪ್ತ ಮೌನಿಗಳಂತೆ!

ನನ್ನ ಹಾಸಿಗೆ ಕೂಡ ನನಗೆ ಬಿಡುವು ಕೊಡಲಿಲ್ಲ
ಪ್ರಕ್ಷುಬ್ಧ ಕಡಲಂತೆ ಗಲಿಬಿಲಿಯ ದಿನಗಳವು!

ಕುದಿಯುವಲೆಗಳ ಮೇಲೆ ಕುಲುಕಿದವು
ಆರ್ದ್ರ ನಿಟ್ಟುಸಿರಲ್ಲಿ ಮುಲುಕಿಸಿದವು
ಅಗಣಿತ ಅಳಲುಗಳಲ್ಲಿ ನರಳಿಸಿದವು!

ಪರಊರ ಪುರುಷನಿಗಾಗಿ ನಿರಂತರ ದುಃಖಿತಳಾದೆ;

ನನ್ನ ಪ್ರೇಮ ಒರಟಾಗಿತ್ತು
ನಿರಂಕುಶವಾಗಿತ್ತು ಕ್ರೂರವಾಗಿತ್ತು
ಅದಕಾಗಿ ನಾ ವಾಯುವಿಹಾರಕೆ ತೊಡಗಿದೆ

★ ★ ★

ನಾನೆಂದೂ ನೋಡಿರದ ಹಾದಿಗಳಲ್ಲಿ ನಡೆದೆ
ಹಿಂದೆಂದೂ ಕಂಡಿರದ ಕಡೆ ಹೆಜ್ಜೆ ಹಾಕಿದೆ;

ಹೊಸ ಮುಖಗಳ ಕಂಡೆ
ಅವುಗಳ ಪ್ರಫುಲ್ಲತೆಗಾಗಿ ಪ್ರೀತಿಸಿದೆ-

ಅದು ಸುಂದರ ಜಗ
ಅಲ್ಲಿ ವಿಭ್ರಮೆಗಳ ಬಳಗ!

ಸಾಗರದ ಬದಿಬದಿಯ ಗಲ್ಲಿಗಳಲ್ಲಿ ನಡೆದೆ
ತೇಲುವ ದೋಣಿಗಳ ಬದಿ ಅಡ್ಡಾಡಿದೆ......

ಅವುಗಳ ತಳದಲ್ಲಿ ಕೊಳೆತ ಕಸ
ಮುಗ್ಗಿ ದುರ್ವಾಸನೆಯಾಗಿ
ಸತ್ತ ಮೀನುಗಳ ಜೊತೆ ಗಬ್ಬಾಗಿ
ಅಸಹ್ಯವಾಗಿ ಮೂಗು ಮುಚ್ಚಿಕೊಂಡೆ!

ಅಲ್ಲಿಂದ ಮುಂದೆ ರಾತ್ರಿರಾಣಿಯರ-
ಬೀದಿಗಳಲ್ಲಿ ನಡೆದೆ......

ಅಲ್ಲೆಲ್ಲಾ ಸೋಗಿನ ಮುಂಚಾಚುವ
ಸ್ತನಗಳ ಮುಂಬಾಗಿನ
ಸ್ವೇಚ್ಛೆಯಲ್ಲಿ ಅಡ್ಡಾಡುವ ಹೆಂಗಳ ದಂಡಿನ
ನಿತ್ಯ ಸುಮಂಗಲಿಯರ ಕಂಡೆ!

ಆ ಹಳದಿ ನೆರಳುಗಳಲ್ಲಿ
ನುಣ್ಣನೆ ನಗೆಚೆಲ್ಲಿ
ಅತ್ತಿತ್ತ ತಿರುಗುವ ಸುತ್ತಿ ಸುಳಿಯುವ
ಗಂಡುಗಳ ಕಡೆ ನೋಡಿ ನಗುವ
ನಿಶಾಬೆಡಗಿಯರ ಕಣ್ಣಾರೆ ಕಂಡೆ!

ಸ್ಮಶಾನಗಳ ಬದಿಬದಿಯ ಬೀದಿಗಳಲ್ಲಿ
ಸತ್ತವರು ಸತ್ತಿರುವ ಜಾಗಗಳಲ್ಲಿ
ಅವರ ಹೆಸರುಗಳು ಮಳೆಯಲ್ಲಿ ಅಳಿಸಿ ಹೋಗಿರುವಲ್ಲಿ
ಸಮಾಧಿಗಳ ಮೇಲೆ ಏನೇನೂ ಇಲ್ಲವಾಗಿರುವಲ್ಲಿ
ವಿಕಟ ವಿಕರಾಳ ವಿಕೃತಿಗಳ
ಹಳದಿ ಹಲ್ಲುಗಳಂತೆ-ಮುದಿ ಹಲ್ಲುಗಳ
ಸುಗ್ಗಿ ಸಂತೆಯಂತೆ- ಎಲ್ಲ ಮ್ಲಾನವಾದದ್ದ ಕಂಡೆ

ಯಾವೊಬ್ಬ ದುಃಖಿತಪ್ತ ಶೋಕಿತನೂ ಅಲ್ಲಿಲ್ಲ
ಒಂದು ಹೂಗುಚ್ಛವೂ ಅಲ್ಲಿನ ಸಮಾಧಿ ಮೇಲಿಲ್ಲ

ಒಂದು ಕಣ್ಣೀರ ಹನಿಯೂ ಅಲ್ಲಿ ಕಾಣಲಿಲ್ಲ!
ಆದರೆ, ಅಲ್ಲಿ ನಾ ಕಂಡೆ
ದಿಂಡು ದಿಂಡು ಗೊಂಡೆ ಗೊಂಡೆ
ಚೆಂಡು ಹೂ ಅರಳುವುದ ಕಂಡೆ!

ಜೊತೆಗೆ – ಕೆಂಪು ಕೆಂಪಾದ ಕಾಡು ಬೋಗನ್‌ವಿಲ್ಲಾಗಳು
ಗೋಪುರ ಗೋಪುರಗಳ ಹತ್ತಿ ಸುತ್ತಿಕೊಂಡದ್ದ ಕಂಡೆ!

ನಾನು ನಡೆದೆ.....ನಡೆದೆ ನಾನು.....
ಕೇಳಿಸುತ್ತಿತ್ತು ನಗರ ಧ್ವನಿ
ಪಳಗಿತ್ತು ನಗರ ನನಗಾಗಿ..... ನನ್ನ ತಪ್ತ
ಹಸಿವು ನಿರ್ದಿಷ್ಟ ಸಂಸ್ಪರ್ಶಕಾಗಿ ಹಾತೊರೆದ–
ಹಸಿವು ದುರ್ಬಲವಾಗಿ ಕರಗಿ ಕಣ್ಮರೆಯಾಯಿತು!

ಆಮೇಲೆ ಒಂದು ದಿನ
ಅವನಿಗೆ ಕಳುಹಿಸಿದೆ ಹೂಗುಚ್ಛವೊಂದನ್ನ –

ಅಲ್ಲಿಂದ ಮುಂದೆ
ಮಲಗಿದರೆ ಗಡದ್ದು ನಿದ್ದೆ
ರಾತ್ರಿಯೆಲ್ಲಾ ಗೊರಕೆ ನಿದ್ದೆ
ಸಂತೃಪ್ತ ನಿದ್ದೆ..... ಕನಸಿರದ ನಿದ್ದೆ!

ಮಾರನೆದಿನ ಬೆಳಗ್ಗೆ ಎದ್ದೆ
ಸಂಪೂರ್ಣ ಮುಕ್ತಳಾಗಿದ್ದೆ!

* * *

ಆದರವನಿಗೆ ನಾನು ಹೇಗೆ ತಿಳಿ ಹೇಳುವುದು?
ಹೇಗೆಂದು ಅವನ ಮನವರಿಕೆ ಮಾಡುವುದು?

ಮರಗಳನು ಕಡಿಯುವುದು
ನಾಗರಿಕ ಜೀವನದ ಗತಿ ಪ್ರಗತಿಗೆಂದು
ರಸ್ತೆಗಳು ರಚಿಸುವುದು
ತಮ್ಮ ಮುನ್ನಡೆಗಾವ ಬಾಧೆ ಬರದಿರಲೆಂದು

ವರುಷವೊಂದುರುಳಿತ್ತು ಆ ಘಟನೆಯಾಗಿ
ಅವನ ಆ ಪ್ರಶ್ನೆಯುಳಿದೇ ಇಹುದು ಪ್ರಶ್ನೆಯಾಗಿ!
ಏಸು ಜನಗಳನೇಸು ಸಲ ಕೇಳಿದರು
ನನ್ನ ದ್ವಂದ್ವಕೆ ತಕ್ಕ ಪರಿಹಾರ ಸೂಚಿಸದೆ
ಸಕಲರೂ ಸಾಗಿದರು ಆ ರಸ್ತೆ ಹಿಡಿದೇ!

ಇಂದಿಗೂ ಆ ದ್ವಂದ್ವ ದ್ವಂದ್ವವಾಗಿದೆ ನನಗೆ
ಅವನ ಪ್ರಶ್ನೆಗೆ ಸೂಕ್ತ ಉತ್ತರವನೀಯದಿರೆ
ಅವನ ನಂಬಿಕೆ ಕರಗಿಬಿಡಬಹುದೆ ಕೊನೆಗೆ!

* * *

# ಅಂಕುರ

ಹಿಂದಿ ಮೂಲ : ಮಹೇಂದ್ರ ಭಟ್ನಾಗರ್
ಅನುವಾದ : ಡಾ|| ಎಂ. ವಿಮಲ

ಕಠೋರ ಕಲ್ಬಂಡೆಯ ಒಡೆದು
ಊರ್ಧ್ವಗಾಮಿ ಶಕ್ತಿಯು
ಮೊಳಕೆಯೊಡೆಯುವುದು !
ಬಿರುಗಾಳಿಯ ಹೊಡೆತಕ್ಕೆದುರಾಗಿ
ಸತತ ಸಂಘರ್ಷಮಯ
ನವ ಜಾಗೃತಿಯ
ದಿವ್ಯಾಂಕುರ ವಿಕಸಿಸುವುದು !
ತಲೆಯೆತ್ತಿ
ತೋಳ ಚಾಚಿ ಅದು ಚಿಗುರಿ
ಗಗನದಲಿ ತೂಗಾಡಿದಾಗ
ಅಮಂಗಳವು ನಾಶವಾಗುವುದು
ಸೃಷ್ಟಿಯ ಜೀವನ-ವಿರೋಧಿ ಭಾವನೆಗಳ
ವೇಗ ವೃದ್ಧಿಯ
ಧೈರ್ಯವು
ದೂರವಾಗುವುದು !

ಅಂಕುರದ ದಾರಿಯಿಂದ
ಸರಿದು ನಡೆ !
ಅಂಕುರದ ತೋಳಿನಿಂದ

ಸರಿದು ನಡೆ!

ಅಂಕುರಗಳು

ಬಿಸಿಲಿನಲ್ಲಿ

ವಿಸ್ತೃತ ಆಗಸದಲ್ಲಿ ವಿಕಸಿಸಲಿ!

* * *

# ನಿಲ್ಲಿಸಿ

ಹಿಂದಿ ಮೂಲ : **ಮಹೇಂದ್ರ ಭಟ್ನಾಗರ್**
ಅನುವಾದ : **ಡಾ|| ಎಂ. ವಿಮಲ**

ಇದು,
ಹಸಿದವರ, ಬೆತ್ತಲೆಯಿರುವವರ, ದೀನ-ದಲಿತರ,
ಮಾನವ – ಅಧಿಕಾರಗಳ,
ಕೂಗಲ್ಲ !

ಇದು ನಿಜವಾದ ಸೋದರ ಭಾವವಲ್ಲ !
ಬಿರುಗಾಳಿಯ ಸಾಗರದಲ್ಲಿ ಸಿಲುಕಿದ ಮಾನವನ
ರಕ್ಷಣೆಯ ದೋಣಿಯಲ್ಲ !

ಸಂಸ್ಕೃತಿಯ ನಗ್ನ ಶವವು
ನಿನ್ನ ಕೈಯಲ್ಲಿರುವಾಗ,
ಲಕ್ಷಾದಿ ಮಾನವರ ರಕ್ತ
ನಿನ್ನ ಹಲ್ಲುಗಳ ಮೇಲಿರುವಾಗ,
ಪವಿತ್ರತೆಯನ್ನು ಭಕ್ಷಿಸುವ ದುರ್ಗಂಧ
ನಿನ್ನುಸಿರಿನಲ್ಲಿರುವಾಗ,

ನೀನು ಮಾನವ-ಅಧಿಕಾರಿಗಳ ಮಾತನಾಡುವೆಯಾ?

ಶೋಷಿತರ ಎದೆಯ ಮೇಲೆ
ಉಕ್ಕಿನ ಮೆಟ್ಟಿನಾಘಾತ !
ಸಾಕು, ನಿಲ್ಲಿಸಿ ನಿಮ್ಮ ಕೆಟ್ಟ-ಇಚ್ಛೆಗಳ ಅಬ್ಬರ !

ಶೋಷಿತ ಸಮಾಜದ ಮೇಲಿಂದ
ರಾತ್ರಿ ಸರಿದುಹೋಗಿದೆ !

ಜಾಗೃತಿಯ ಮಳೆಯಾಗುತ್ತಿದೆ
ಕಾಗದದ ಗೋಡೆಗಳ ಮೇಲೆ
ಕೃತ್ರಿಮ ಬಣ್ಣವ ಬಳಿಯದಿರಿ!
ಮಾನವ-ಅಧಿಕಾರಗಳ ಕುರಿತು
ಕೂಗಾಡುವವರು ಎಚ್ಚೆತ್ತಿದ್ದಾರ,
ಈಗ ನಿಮ್ಮೀ ಪೊಳ್ಳು ಮಾನವತೆಯ ಅರಮನೆ ಕುಸಿದು ಬೀಳುವುದು!

ಅದ ಹತ್ತಿ,
ಸಮಾನತೆಯ ಹೊಸ ಹಾಡನ್ನು
ಪ್ರತಿ ಮನುಜನೂ ನಿರ್ಭಯವಾಗಿ
ಹಾಡುವನು.

* * *

# ಶ್ರೀ ಸತ್ಯಂ ಶಂಕರಮಂಚಿ

ಜನನ - ೩-೩-೧೯೩೭ ಮರಣ-೧೯೮೭

ಜನ್ಮಸ್ಥಳ - ಅಮರಾವತಿ, ಗುಂಟೂರು ಜಿಲ್ಲೆ. 'ಮಣ್ಣು - ಬರೀ ಮಣ್ಣು' ಕಥೆ ಶ್ರೀ ಸತ್ಯಂ ಶಂಕರಮಂಚಿಯವರ ಅಮರಾವತಿ ಕಥೆಗಳಿಂದ ಸಂಗ್ರಹಿಸಲಾಗಿದೆ. ಶ್ರೀ ಸತ್ಯಂ ಶಂಕರಮಂಚಿರವರು ತಾವು ಜನ್ಮವೆತ್ತಿದ 'ಅಮರಾವತಿ'ಯ ಋಣವನ್ನು ಈ ಕಥೆಗಳ ಮೂಲಕ ತೀರಿಸಿಕೊಂಡಿದ್ದಾರೆ ಎಂದು ಹೇಳಬಹುದು. 'ಅಮರಾವತಿ ಕಥಲು' ಅಪರೂಪ ಶಿಲ್ಪಗಳು ಎಂದು ಈ ಕಥಾ ಸಂಕಲನಕ್ಕೆ ಮುನ್ನುಡಿಯನ್ನು ಬರೆದ ಹೆಸರಾಂತ ತೆಲುಗು ಸಾಹಿತಿ ಶ್ರೀ ಮುಳ್ಳಪೂಡಿ ವೆಂಕಟರಮಣರವರು ಹೇಳಿದರು. 'ಹೋದವರ ಕಣ್ಣುಗಳಲ್ಲಿ ಕೃಷ್ಣೆಯನ್ನು ಹರಡಿಸಿ, ಹೃದಯದಲ್ಲಿ ಸಿಹಿಯಾದ ಬೆಂಕಿಯನ್ನು ಹಚ್ಚುವ ಗಾಥಾಶತಿ ಅಮರಾವತಿ ಕಥೆಗಳು' ಎಂದು ಇನ್ನೊಬ್ಬ ಕಥೆಗಾರರಾದ ಶ್ರೀ ಎಮ್ವೀಎಲ್ ಈ ಕಥೆಗಳ ಪ್ರಶಂಸೆ ಮಾಡಿದ್ದಾರೆ.

ಶ್ರೀಸತ್ಯಂ ಶಂಕರಮಂಚಿರವರು ಏವಾರು ಸರ್. ಸಿ. ಆರ್. ಕಾಲೇಜ್‌ನಲ್ಲಿ ಬಿ. ಎ. ಮತ್ತು ಉಸ್ಮಾನಿಯಾ ಯೂನಿವರ್ಸಿಟಿಯಲ್ಲಿ ಎಲ್. ಎಲ್. ಬಿ.ಯನ್ನು ಮುಗಿಸಿದರು. ಅಮರಾವತಿ ಕಥೆಗಳಿಗೆ ೧೯೭೯ರಲ್ಲಿ ರಾಷ್ಟ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಬಂದಿತ್ತು. ಶ್ಯಾಮ್ ಬೆನಗಲ್‌ರವರ ನಿರ್ದೇಶನದಲ್ಲಿ ಅಮರಾವತಿ ಕಥೆಗಳು ದೂರದರ್ಶನದಲ್ಲಿ ಪ್ರಸಾರವಾದವು.

ಷೇಕ್ ಜಾನ್ಸನ್ ಶಾಸ್ತ್ರಿ, ಶಾರದಾನಾಥ್, ಸಾಯಿರಾಂ ಎಂಬ ಮತ್ತಿತರ ಕಾವ್ಯನಾಮಗಳಲ್ಲಿ ಸಹ ರಚನೆಗಳನ್ನು ಮಾಡಿದ ಶ್ರೀಸತ್ಯಂ ಶಂಕರಮಂಚಿರವರು ಆಕಾಶವಾಣಿಯಲ್ಲಿ ಕೆಲಸಕಾರ್ಯವನ್ನು ನಿರ್ವಹಿಸಿದರು.

ಅಮರಾವತಿ ಕಥೆಗಳು, ಕಾರ್ತೀಕ ದೀಪಾಲು (ಕಥಾ ಸಂಪುಟಗಳು), ರೇಪಟಿದಾರಿ, ಸೀತ ಸ್ವಗತಾಲು, ಆಖರೀ ಪ್ರೇಮಲೇಖ ಉಡಾರಿಲೋ ಕಲುವಪೂಲು (ಕಾದಂಬರಿಗಳು), ಹರಹರಮಹದೇವ (ನಾಟಕ) ಇಂತೇ ಸಂಗತುಲು, ತಥ್ಯಮು ಸುಮತೀ, ಎಂದರೋ ಮಹಾನುಭಾವುಲು (ಶೀರ್ಷಿಕಲು) ಇವರ ಇತರ ರಚನೆಗಳು.

* * *

# ಮಣ್ಣು... ಬರೀ ಮಣ್ಣು

ತೆಲುಗು ಮೂಲ : ಶ್ರೀ ಸತ್ಯಂ ಶಂಕರಮಂಚಿ
ಡಾ|| ಡಿ. ರಾಜೇಶ್ವರಿ

ಬೀದಿಯಲ್ಲಿ ನಡೆಯುತ್ತಿದ್ದೇನೆ.

ಮಣ್ಣಿನಲ್ಲಿ ನಡೆಯುತ್ತಿದ್ದೇನೆ. ಧೂಳನ್ನು ಎಬ್ಬಿಸುತ್ತಾ, ಧೂಳನ್ನು ತಳ್ಳುತ್ತಾ ನಡೆಯುತ್ತಿದ್ದೇನೆ.

ಆ ಮಣ್ಣು,, ಆ ಧೂಳು..... ಅದರಲ್ಲಿವೆ ಲಕ್ಷ ಕಥೆಗಳು. ಅದರಲ್ಲಿ ಅಡಗಿವೆ ಕೋಟಿ ಬದುಕುಗಳು.

ದೇವಿಯರ ಕಥೆಗಳು, ದೇವತೆಯರ ಕಥೆಗಳು, ಊರುಗಳನ್ನು ಆಳಿದವರ ಕಥೆಗಳು, ಮೆರವಣಿಗೆ ಹೋದವರ ಕಥೆಗಳು.

ಭಿಕ್ಷೆಯನ್ನು ಬೇಡಿಕೊಂಡು ತಿಂದವರ ಕಥೆಗಳು. ಅರೆಹೊಟ್ಟೆ ಜನರ ಕಥೆಗಳು, ಪಕ್ಷಿಗಳ ಕಥೆಗಳು, ಪಾರಿವಾಳದ ಕಥೆಗಳು – ಎಲ್ಲಾ ಮನುಷ್ಯರ ಕಥೆಗಳೇ. ಏನೆಲ್ಲ ಇದೆ ಆ ಮಣ್ಣಿನಲ್ಲಿ......

ಎದುರಿನಲ್ಲಿ ಬಿರುಗಾಳಿ
ಎತ್ತರಕ್ಕೆ ಎದ್ದ ಮಣ್ಣು, ಧೂಳು

ಆ ಮಣ್ಣು ಬಯ್ಯುಕೊಳ್ಳುತ್ತಿದೆ. ಆ ಧೂಳು ನರಳುತ್ತಾ ಇದೆ. ಎದುರಿನವರ ಕಣ್ಣುಗಳಲ್ಲಿ ಧೂಳನ್ನು ಹಾಕಿದರೆ, ಅವನೂ ಹಾಕುತ್ತಾನೆ. ಕಣ್ಣುಗಳ ಗರಗರ! ಹೊಟ್ಟೆ ಚುರು ಚುರು!

ಎಲ್ಲಯ್ಯ ತನಗೆ ಬೇಕಾಗಿ ಪುಲ್ಲಯ್ಯನ ಹತ್ತಿರ ಸಾಲಕ್ಕೆ ಹೋದರೆ, ಇದ್ದ ಸ್ವಲ್ಪ ಹೊಲವನ್ನು ಅಡ ಇಟ್ಟುಕೊಂಡು, ಸಾಲವನ್ನು ಕೊಟ್ಟು ಬಡ್ಡಿಗೆ ಬಡ್ಡಿ ಜೊತೆ ಸೇರಿಸಿ, ವಾಸಿಸುತ್ತಿದ್ದ ಮನೆಯಿಂದಲೂ ಹೊರಗೆ ಅಟ್ಟಿದರೆ.... ಎಲ್ಲಯ್ಯನ ಮನೆಯನ್ನು ತನ್ನ ಮನೆಯಂತೆ ಮಾಡಿಕೊಂಡು ಪುಲ್ಲಯ್ಯನು ಖುಷೀ ಪಡುತ್ತಾ ಇರುವಾಗ, ಆ ಮನೆಯಲ್ಲಿ ದೀಪವನ್ನಿಡುವ ದಿಕ್ಕು ಇಲ್ಲದಂತೆ ಆಯಿತಲ್ಲವೇ। ಮನೆಯಾಕೆ ಹೊರಟುಹೋದರೆ ಇವನು ಸಂತಾನವಿಲ್ಲದೆ ಒಬ್ಬಂಟಿಗನಾಗಿ, ಬಿದ್ದುಹೋಗುತ್ತಿದ್ದ ಎರಡು ಮನೆಗಳನ್ನೂ ನೋಡಿಕೊಳ್ಳುತ್ತಾ

ಅಡ ಇಟ್ಟಿರುವ ಪತ್ರಗಳನ್ನು ಓದಿಕೊಳುತ್ತಾ, ಯಾವ ತಾಯಿ ಆದರೂ ಸ್ವಲ್ಪ ಗಂಜಿ ಹಾಕಿದರೆ ಕುಡಿಯುತ್ತಾ ಹರೀ ಎಂದ ಪುಲ್ಲಯ್ಯನು ತನ್ನ ಕಣ್ಣಿನಲ್ಲಿ ತಾನೇ ಧೂಳನ್ನು ಹಾಕಿಕೊಂಡನಲ್ಲವೆ?

ನಡೆ ನಡೆ ಮುಂದಕ್ಕೆ ನಡೆ!

ಸುಣ್ಣಗಿರುವ ಧೂಳಿನಲ್ಲಿ, ಸಣ್ಣಗಿರುವ ಧೂಳಿನಲ್ಲಿ ಅಂಗಾಲುಗಳು ಕಚಗುಳಿ ಇಟ್ಟು ಮುಂದಕ್ಕೆ ನಡೆದರೆ ಆ ಮರದ ಕೆಳಗೆ ಧೂಳು ಕಣ್ಣೀರು ಸುರಿಸುತ್ತಲಿದೆ. ಅಲ್ಲೇ! ಅಲ್ಲೇ! ಹುಚ್ಚುಹುಡುಗಿ! ಜಾನಕಿ! ತಾನು ಮನಸಾರೆ ಪ್ರೀತಿಸಿ ಖಂಡಿತ ತಾಳಿಕಟ್ಟುವೆನೆಂದು ನಂಬಿದ ವಯಸುಗಾರನು ಇನ್ನೊಬ್ಬಳ ಕೈಹಿಡಿದು ಪಲ್ಲಕ್ಕಿಯಲ್ಲಿ ಮೆರವಣಿಗೆಯಲ್ಲಿ ಹೋಗುತ್ತಾ ಇರುವಾಗ ಆ ಮರದ ಹಿಂದೆ ನಿಂತುಕೊಂಡು ನೋಡಿದಳು. ತನ್ನ ಸರ್ವಸ್ವವೂ ತನ್ನಿಂದ ದೂರವಾಗಿ ಹೋಗಿರುವಾಗ.... ಕಣ್ಣುಗಳು ಕರಗಿಹೋಗಿರುವಂತೆ ಜಲಜಲನೆ ಬಿದ್ದ ಕಣ್ಣೀರು ಆ ಮಣ್ಣಿನಲ್ಲೇ ಇಂಗಿಹೋದವು. ಇವತ್ತಿಗೂ ಸಹ ಹಸಿಯಾದ ಮಣ್ಣು ಅದು. ಮುಟ್ಟಿದರೆ! ಅಣ್ಣಾ! ನನ್ನ ಸುದ್ದಿ ನಿನಗೇಕೆ! ಎಂದು ದುಃಖದಲ್ಲಿ ಮುಳುಗಿಹೋಗುತ್ತದೆ.

ಮುಂದೆ ನಡೆದರೆ ಉಪ್ಪಾರ ಸಂಗನ ಗುಡಿಸಲು. ಸಂಗನು ಮುದುಕನಾಗಿ ಮಂಚದಲ್ಲಿ ಬಿದ್ದಿರುವಾಗ ಅವನ ಮಗಳು ಲಚ್ಚಿ ಕೂಲಿಯನ್ನು ಮಾಡಿ ಗಂಜಿ ಮಾಡಿ ಹಾಕುತ್ತಿದ್ದಳು. ಗುಡಿಸಲು ಅರ್ಧಭಾಗ ಬಿದ್ದುಹೋಯಿತು. ಏಕೆ? ಸಂಗನು ಮಣ್ಣಿನಲ್ಲಿ ಹುಟ್ಟಿದನು. ಮಣ್ಣಿನಲ್ಲೇ ಬದುಕಿದನು. ಮಣ್ಣಿನಲ್ಲೇ ಬೆರೆತನು. ಈ ಊರಿನಲ್ಲಿರುವ ಗೋಡೆಗಳೆಲ್ಲಾ ಮೂರುಪಾಲು ಅವನ ಕೈಯಿಂದ ಕಟ್ಟಿರುವಂತಹವೇ! ಅವನ ಗುಡಿಸಲು ಗೋಡೆ ಬಿದ್ದರೆ ಅವನು ಕಟ್ಟಿಕೊಳ್ಳಲಾರನು!

ಅರುವತ್ತು ವರ್ಷದವಳಾದ ಕುಂಬಾರ ಸೀತಾಳಿಗೆ ಸಹ ಮಣ್ಣೇ ಪ್ರಾಣ. ಬೇಗಬೇಗ ಅವಳು ಮಡಕೆಗಳನ್ನು ಮಾಡುತ್ತಾಳೆ. ತಣ್ಣಗಿರುವ ಮಡಿಕೆಗಳು. ಅನ್ನಮಾಡುವ ಮಡಿಕೆಗಳು. ವಗ್ಗರಣೆ ಹಾಕುವ ಪಲ್ಯದ ಚಟ್ಟಿಗಳು, ಬೇಳೆಸಾರುಗಳು.... ಪಾಯಸಗಳು, ಎಷ್ಟು ಒಳ್ಳೆಯ ಮುಚ್ಚಳಗಳು....... ಆದರೆ ಇಷ್ಟು ವಯಸ್ಸು ಆದರೂ ಅನ್ನವೇನೆಂದು ಸೀತಾಳಿಗೆ ಗೊತ್ತಿಲ್ಲ.... ಆ ಪಕ್ಕದಲ್ಲಿ ಕಪ್ಪು ಹಲಗೆಗಳು, ಜ್ಞಾನ ಹಲಗೆಗಗಳು..... ಬಳಪವನ್ನು ಹಿಡಿದು ಸ್ವಾತಿಮುತ್ತುಗಳಂತೆ ಓನಾಮ ಎಂದು ತಿದ್ದುವ ಹಲಗೆಗಳು. ಬೆಳೆದು ಮೇಧಾವಿಗಳಾಗಿ, ಹತ್ತು ಜನರಲ್ಲಿ ದೊಡ್ಡವರನಿಸಿಕೊಂಡು, ಆ ಹಲಗೆಗಳನ್ನು, ಆ ಸೀತಾಳನ್ನು ಮರೆತುಹೋಗಿದ್ದ..... ಓ ಸ್ವಾಮಿಗಳೇ, ಮಣ್ಣು ಮುಂದಕ್ಕೆ ಕರಿಯುತ್ತಲಿದೆ, ಬನ್ನಿ. ಒಬ್ಬ ಅಯ್ಯ ನೇಗಿಲನ್ನು ಭುಜದ ಮೇಲೆ ಎತ್ತಿಕೊಂಡು ಎದುರಿಗೆ ಬರುತ್ತಿದ್ದನು. ನೆಲವನ್ನೇ ನಂಬಿಕೊಂಡಿರುವವನು ಅವನು! ನಮಗೆ ಮೊಸರನ್ನು, ಹಾಲನ್ನು ಕೊಡುತ್ತಿರುವ ಆ ಸ್ವಾಮಿ ಎರಡು ಹೊತ್ತೂ (ಸಂಗಟಿ ಸಂಕಟಿ/ಸಂಗಟೆ)ಗಂಜಿಗೆ ಸಮನಾದ ಅಪಾರ ಕುಡಿಯುತ್ತಾನೆ. ಅವನು ತುಪ್ಪದ ತೊಟ್ಟನ್ನು ತಿಳಿಯನು. ಆದರೇನು! ಆ ಕಣ್ಣುಗಳಲ್ಲಿ ಛಲ, ಭುಜದಲ್ಲಿ ಬಲ. ಅವನು ಮೇಲಕ್ಕೆತ್ತಿರುವ (ನೇಗಿಲು). ಆ ನಡಿಗೆಯಲ್ಲಿ ರಾಜಸ, ಆ ಮೀಸೆಯಲ್ಲಿ ಬಿಂಕ, ಆ ನೋಟದಲ್ಲಿ ಗಾಂಭೀರ್ಯ. ಇವೆಲ್ಲವೂ, ಎಲ್ಲಿಂದ ಬಂದಿದ್ದವು? ಆ ಸ್ವಾಮಿ

ಭೂಮಿಯ ಮಗನಯ್ಯಾ. ಓ ತಂದೆ, ನಿನ್ನ ನೇಗಿಲಿಗೆ ಅಂಟಿಕೊಂಡಿದ್ದ ಮಣ್ಣಿನ ಒಂದು ಚೂರು ನನಗೆ ದಯಮಾಡಿ ಕೊಡಯ್ಯ.

ಮಣ್ಣು ಮಾತಾಡುತ್ತಾ ಇದೆ. ತುಳುಕಿ ತುಳುಕಿ ಬೀಳುತ್ತಲಿದೆ. ಇದು ಮಹಾಪುರುಷರ ಪಾದಗಳನ್ನು ತಾಕಿದ್ದ ಮಣ್ಣು. ಬೌದ್ಧರ ಹಾವುಗೆ ತೂರಿ ಪಾದಾಭಿವಂದನೆಯನ್ನು ಮಾಡಿಕೊಂಡಂತಹ ಮಣ್ಣು. ಎಲ್ಲೆಲ್ಲಿ ನೋಡಿದರೂ ಮಣ್ಣು. ಕೃಷ್ಣೆಯ ದಡದ ತುಂಬಾ ಮಣ್ಣು. ಕೃಷ್ಣೆಯ ಗರ್ಭದೊಳಗೆ ಮಣ್ಣು ಕೃಷ್ಣೆಯ ಆಚೆ ಮಣ್ಣು. ಊರು ತುಂಬಾ ಮಣ್ಣು, ಮಣ್ಣು ತುಂಬಾ ಕಥೆಗಳು. ಮಣ್ಣು ತುಂಬಾ ಚರಿತ್ರೆ. ತಲೆ ತಲಾಂತರದಿಂದ ಬಂದ ಮಣ್ಣನ್ನು ನಾವು ಮರೆಯುತ್ತಿದ್ದೆವಾ? ತಮ್ಮಾ ಚಿಕ್ಕ ವಯಸ್ಸಿನಲ್ಲಿ ನಾವು ಕೈಹಿಡಿದು ತಿಂದಿರುವ ಮಣ್ಣು ಇದೆಯೇ. ಎಷ್ಟೊಂದು ಸಾಧಿಸಿದ್ದೇವೆ ಎಂದು ತಿಳಿದುಕೊಂಡ ಮೇಲೆ ನಾವು ಹೋದರೆ ನಾವು ಆಗುವುದು ಈ ಮಣ್ಣೇ!

ಈ ಮಣ್ಣನ್ನು ಎಬ್ಬಿಸುತ್ತೇನೆ. ತುಂಬ ಉದ್ದಕ್ಕೆ ಎಬ್ಬಿಸುತ್ತೇನೆ. ಈ ಕಥೆ ಕಥೆಗಳ ಮಣ್ಣನ್ನು, ಮನುಷ್ಯರಲ್ಲಿರುವ ಮಣ್ಣನ್ನು ತುಫಾನಿನಂತೆ ಎಬ್ಬಿಸುತ್ತೇನೆ. ಇದರಲ್ಲಿ ಉರುಳಾಡುತ್ತೇನೆ. ನನ್ನ ಮೈತುಂಬ ಚೆಲ್ಲಿಕೊಳ್ಳುತ್ತೇನೆ. ಮೈತುಂಬ ಮಣ್ಣಿನ ವಿಭೂತಿಯನ್ನು ಹಚ್ಚಿಕೊಂಡು ಕಣ್ಣುಗಳನ್ನು ಬಿಚ್ಚಿ ಮಣ್ಣಿನ ಹೊಟ್ಟೆ ಒಳಗೆ ನೋಡುತ್ತೇನೆ.

..... ತಾಯಿಯನ್ನು ಮರೆಯುತ್ತಿದ್ದೀರಾ ಮಕ್ಕಳಾ ಎನ್ನುತ್ತಾ ಇದೆ ಭೂಮಿ ತಾಯಿ.

ಮಣ್ಣನ್ನು ಮರೆಯುತ್ತಾ ಇದ್ದೇವೆ. ಮನುಷ್ಯರನ್ನು ಮರೆಯುತ್ತಾ ಇದ್ದೇವೆ.

ನನಗೆ ಮಣ್ಣಿನ ಹುಚ್ಚು ಏರಿರಬಹುದೆಂದು ನೀವು ತುಳಿಯಬಹುದು.

ನನ್ನ ಹಾಗೆ ಈ ಮಣ್ಣಿನ ಹುಚ್ಚು ನನ್ನ ಜೊತೆಗಿರುವ ಜನರಿಗೆ ಯಾವಾಗ ಬರುತ್ತದೆ?

ಯಾವಾಗ ನನ್ನವರೆಲ್ಲಾ ಮಣ್ಣನ್ನು, ಮಣ್ಣಿನಲ್ಲಿರುವ ಮನುಷ್ಯರನ್ನು ಅಪ್ಪಿಕೊಳ್ಳುವರೋ!

* * *

# ರ್‍ಯಾಂಬೋ ( ೧೮೫೪-೧೮೯೧ )

ಫ್ರೆಂಚ್ ಸಿಂಬಲಿಸ್ಟ್ ಕವಿಗಳ ಕೇಂದ್ರ ಸ್ಫೂರ್ತಿ ಆರ್ಥರ್ ರ್‍ಯಾಂಬೋವಿನ ಕಾವ್ಯಪ್ರತಿಭೆ ಎಂಟನೇ ವಯಸ್ಸಿಗೇ ಪ್ರಕಾಶವಾಯಿತು. ಈ ಮೇಲಿನ ಕವಿತೆ ಈತನ ದೀರ್ಘ ಕವನವಾದ 'ಮತ್ತೇರಿದ ದೋಣಿ' (Drunken Boat)ಯ ಒಂದು ಭಾಗವಾದ 'ಸಾನೆಟ್ ಆಫ್ ಒವೆಲ್ಸ್'ನ ಅನುವಾದವಾಗಿದೆ. ಫ್ರೆಂಚ್‌ಕಾವ್ಯ ನಿರ್ಜೀವ ಸ್ಥಿತಿಯನ್ನು ತಲುಪಿದಾಗ ಕವಿ ಮತ್ತು ಸಾಹಸಿಯಾದ ರ್‍ಯಾಂಬೋ ಸಿಂಬಲಿಸ್ಟ್ ಚಳವಳಿಯನ್ನು ಹುಟ್ಟು ಹಾಕಿದವನು. ರ್‍ಯಾಂಬೋಗೆ ಕಾವ್ಯವೆಂಬುದು ಬದುಕಿನ ಒಂದು ಅಂಗ. ರೊಮ್ಯಾಂಟಿಕ್ ಕಾವ್ಯದಿಂದ ದೂರ ಸರಿದ ರ್‍ಯಾಂಬೋ ವಿಶಿಷ್ಟ ರೀತಿಯ ಶಬ್ದಗಳ ಪ್ರತಿಮಾಲೋಕವನ್ನೇ ತೆಗೆದಿಟ್ಟು ಜನರನ್ನು ಬೆಚ್ಚಿಸಿದ. ಪ್ಯಾರಿಸ್‌ನಲ್ಲಿದ್ದ ಫ್ರೆಂಚ್ ಹಿರಿಯ ಗಣ್ಯಕವಿ ವರ್ಲೇನಿಗೆ ರ್‍ಯಾಂಬೋ ತನ್ನ ಕವಿತೆಗಳನ್ನು ಕಳಿಸಿದ. ವರ್ಲೇನ್ ಈತನ ಕಾವ್ಯಪ್ರತಿಭೆಗೆ ಚಕಿತನಾಗಿ ಮನಸೋತು ತಕ್ಷಣವೇ ರ್‍ಯಾಂಬೋನನ್ನು ಪ್ಯಾರಿಸ್ಸಿಗೆ ಕರೆಸಿಕೊಂಡು ಮೆಚ್ಚುಗೆ ಸೂಚಿಸಲು, ಕ್ರಮೇಣ ಅವರ ಸ್ನೇಹ ವಿಚಿತ್ರ ಜಟಿಲ ಸಂಬಂಧವಾಯಿತು. ಪ್ಯಾರಿಸ್‌ನ ಬುದ್ಧಿಜೀವಿಗಳು, ಕವಿಗಳು ವಿಮರ್ಶಕರ ಗೋಷ್ಠಿಗಳಲ್ಲಿ ಇವರಿಬ್ಬರೂ ಭಾಗವಹಿಸಲು ಆರಂಭಿಸಿದರು. ಲಂಡನ್ ನಗರಕ್ಕೆ ಇಬ್ಬರೂ ಹೊರಟು ಸಲಿಂಗರತಿಯಲ್ಲಿ ತೊಡಗಿದರು. ಇಬ್ಬರಲ್ಲೂ ಮನಸ್ತಾಪ ಜಗಳಗಳು ಆರಂಭವಾದವು. ಇಂತಹ ಸಂಕೀರ್ಣ ಸಂಬಂಧ ಅತಿರೇಕಕ್ಕೆ ಹೋಗಿ ವರ್ಲೇನ್ ರ್‍ಯಾಂಬೋಗೆ ಗುಂಡಿಟ್ಟು ಹೊಡೆದಾಗ ಅದು ಆತನ ಕೈಗೆ ತಾಗಿ ಪ್ರಾಣಾಪಾಯದಿಂದ ರ್‍ಯಾಂಬೋ ಪಾರಾದ. ವರ್ಲೀನ್ ಇದರಿಂದ ಸೆರೆಮನೆಯ ವಾಸ ಅನುಭವಿಸಬೇಕಾಯಿತು. ರ್‍ಯಾಂಬೋ ಮುಂದೆ ಅನೇಕ ದೇಶಗಳನ್ನು ಸುತ್ತಿ ಅನೇಕ ವೃತ್ತಿಗಳನ್ನು ಕೈಗೊಂಡ. ಸರ್ಕಸ್ ಕಂಪನಿ, ಕಾಫಿ ವ್ಯಾಪಾರಿಯಾಗಿ ಕೊನೆಗೆ ಇಥಿಯೋಪಿಯಾಗೆ ಪ್ರಯಾಣ ಬೆಳೆಸಿ ಅಲ್ಲೇ ನೆಲಸಿದ. ಅಲ್ಲಿನ ಅಂತರ್ಯುದ್ಧದಲ್ಲೂ ಭಾಗವಹಿಸಿ ಶಸ್ತ್ರಾಸ್ತ್ರಗಳ ಸಾಗಾಣಿಕೆಯಲ್ಲಿ ತೊಡಗಿ ಅಲ್ಲಿನ ದೊರೆ ಮಾನೇಲಿಕ್‌ಗೆ ಹತ್ತಿರದವನಾದ. ಯುದ್ಧ ಮುಗಿದ ಮೇಲೆ ಆತನ ಶಸ್ತ್ರಾಸ್ತ್ರಗಳ ವ್ಯಾಪಾರ ಕುಸಿದುಬಿದ್ದಿತು. ಅಲೆಮಾರಿಯಾದ ರ್‍ಯಾಂಬೋ ೧೮೯೧ರ ವೇಳೆಗೆ ವಿವಾಹವಾಗಲು ತನ್ನ ತಾಯ್ನಾಡಿಗೆ ಮರಳಿಬಂದ. ಈ ವೇಳೆಯಲ್ಲಿ 'ಇಲ್ಯೂಮಿನೇಶನ್' ಎಂಬ

ಆತನ ಶ್ರೇಷ್ಠ ಕವನಸಂಕಲನ ಪ್ರಕಟವಾಗಿತ್ತು. ಆತನು ಬಹಳ ಪ್ರಸಿದ್ಧನಾಗಿದ್ದ. ಈ ವೇಳೆಗೆ ಆತನ ಆರೋಗ್ಯ ಸಂಪೂರ್ಣ ಹದಗೆಟ್ಟಿತ್ತು. ಅತ್ಯಂತ ಜನಪ್ರಿಯತೆಯನ್ನು ಗಳಿಸಿ ಉತ್ತುಂಗ ಸ್ಥಿತಿಯನ್ನು ತಲುಪಿದ್ದ ರ್‍ಯಾಂಬೋ ಕ್ಯಾನ್ಸರ್ ಕಾಯಿಲೆಗೆ ಬಲಿಯಾಗಿದ್ದ. ಈತನ ಕಾಲಲ್ಲಿ ಗಡ್ಡೆ ಬೆಳೆದು ಕಾಲನ್ನು ಕತ್ತರಿಸಬೇಕಾಯಿತು. ಆತ ತನ್ನ ಮೂವತ್ತೇಳನೆಯ ವಯಸ್ಸಿಗೇ ಕೊನೆಯುಸಿರೆಳೆದ. ರ್‍ಯಾಂಬೋ ಜಗತ್ತಿನ ಶ್ರೇಷ್ಠ ಕವಿಗಳಲ್ಲಿ ಒಬ್ಬನಾಗಿದ್ದಾನೆ. 'ಸೀಸನ್ ಇನ್ ದ ಹೆಲ್' ಎಂಬ ಗದ್ಯ ಕೃತಿಯು ಇವನ ಆತ್ಮಕಥನವೇ ಆಗಿದೆ. ಇಥಿಯೋಪಿಯಾ ಗುಡ್ಡಗಾಡು ಜನರ ಬದುಕು ಬವಣೆಯನ್ನು ಉಜ್ವಲ ಕಾವ್ಯವಾಗಿಸಿದ. ಫ್ರೆಂಚ್ ಕಾವ್ಯಪ್ರಪಂಚದಲ್ಲಿ ಈತನ ಸ್ಥಾನ ವಿಶಿಷ್ಟವಾದುದು. ಸದಾ ಸಮುದ್ರಯಾನದಲ್ಲೇ ಜೀವನ ಕಳೆದ ರ್‍ಯಾಂಬೋ ತನ್ನ ಜಲಯಾನದ ಅನುಭವ ಗಳನ್ನೇ ಕಾವ್ಯಕ್ಕೆ ಕೇಂದ್ರ ರೂಪಕವನ್ನಾಗಿಸಿಕೊಂಡ.

* * *

# ಹಾರಲಾರದ ಹಕ್ಕಿ

ತೆಲುಗು ಮೂಲ : ಅಂಬಿಕಾ ಅನಂತ್
ಅನು : ಡಾ॥ ವಿಜಯಾ ಸುಬ್ಬರಾಜ್

ಬೇಸಿಗೆಯ ಬಿಸಿಲಲ್ಲಿ
ಎಳೆ ನೀಲಿ ಮುಗಿಲಲ್ಲಿ
ಮೆಲ್ಲಮೆಲ್ಲನೆ ಹೊರಳುವ
ಪಕ್ಕಿಗಳ ಕಂಡೆಯಾ?
ಅಸೂಯೆಯ ಎದೆ ತುಂಬಿಕೊಂಡೆಯಾ?
ಯಾರಿಗೋ ದುಡಿಯುವ
ಕಾಸಿಗಾಗಿ ಬೆನ್ನ ಭಾರವ ಹೊತ್ತವನೆ
ಹಾರ ಕಲಿತರೂ ಹಾರಲಾಗದ
ಅಸಹಾಯಕತೆಯ ಹಕ್ಕಿ ನೀನು
ಹೆರುವ ವೇದನೆ ನಿನ್ನ ನಗೆಯೊಡನೆ ಮುಗಿದರೂ
ಎದೆ ಬಾವು ನರಳಿಕೆಗೆ ಇಲ್ಲ ಕೊನೆಯು
ಯೌವ್ವನದ ಕನಸುಗಳು
ಬದುಕಿನಾ ಸವಿಗಳು
ಶಬ್ದಕೋಶದ ನಿರ್ಜೀವ ಶಬ್ದಗಳು
ಹರಿವ ಕಂಬನಿಯ ಸರಮಾಲೆ
ಹಸಿವಿನಾ ಉರಿಜ್ವಾಲೆ
ಬತ್ತಿದಾ ಕೆನ್ನೆಯಲಿ
ಮರುವಿನಾ ಹೂವುಗಳು
ನೋವು ನರಳಿಕೆ

# ಆತ್ಮಹತ್ಯೆ

ತೆಲುಗು ಮೂಲ : ಅಂಬಿಕಾ ಅನಂತ್
ಅನುವಾದ : ಡಾ || ವಿಜಯಾ ಸುಬ್ಬರಾಜ್

ಹಗಲು ರಾತ್ರಿಗಳೆಲ್ಲ
ಗ್ರಹಣ ಗಲಭೆಯನೆಬ್ಬಿಸಿ
ಜೀವನ ಚಂದ್ರನನ್ನೇ
ಭೂತ ಬಾಯ ಗ್ರಾಸವಾಗಿಸಲು
ಎದೆಯಾಳದಲೆಲ್ಲೋ ಕುಳಿತ
ಚಕೋರದ ಕಣ್ಣುಗಳಿಂದ
ಸುರಿಯುತ್ತಿದೆ ಅಗ್ನಿ ಕಣ್ಣೀರು
ಕಾಯುವ ಕಾತರವೆ ಬದುಕಾಗಿ
ಅಸಹಾಯಕತೆಯೇ ಹಾಡಾಗಿ
ಅರ್ಥವಾಗದ ಬೇಸರದೊಳಗೆ
ಕಕ್ಕಾವಿಕ್ಕಿಯಾಗಿ
ಉಚ್ಛ್ವಾಸ ನಿಶ್ವಾಸ ದೀಪದುರಿಯಲ್ಲಿ
ಪ್ರಾಣಪಕ್ಷಿಯ ಚಡಪಡಿಕೆ
ಬಯಸುತಿದೆ ಸ್ಮಶಾನ ಶಾಂತಿ
ಬಿಗಿದ ಬಂಧನದೊಡಲ ಚೀರಿ
ಬಯಸುತಿದೆ ಒಳಕುಳಿತ
ಆತ್ಮ ಬಿಡುಗಡೆಯ ಹಾದಿ ನೆರಳ.

* * *

# ಜೀವನ ಸ್ವಾತಂತ್ರ್ಯ

ಕೊರಿಯನ್ ಮೂಲ : ಚೋ ಕುಂಗ್ ಸೂ
ಅನು : ಎಂ. ಎಸ್. ಅಶ್ರಫ್

ಒಳಿತಿರಲಿ ಕೆಡುಕಿರಲಿ
ಜೀವನವೆ ಸ್ವಾತಂತ್ರ್ಯ.
ಇದು ನಿತ್ಯ ಬಿತ್ತರಗೊಳ್ಳುತ್ತದೆ
ಸದಾ ಬೆಳಕಿನೆಡೆಗೆ
ಕೊಂಡೊಯ್ಯುತ್ತದೆ ಮಾಸದ ಬಣ್ಣದೆಡೆಗೆ
ನಿತ್ಯ ನಿತ್ಯ ಸ್ವಾತಂತ್ರ್ಯವೆಡೆಗೆ

ಜೀವನವೆಂಬುದು ಕ್ರೀಡಾರಂಗ
ಜೀವನಗಳ ಜೊತೆ ಆಡಿ ನಲಿಯುತ್ತದೆ
ಸ್ವಾತಂತ್ರ್ಯವನ್ನು ಸ್ವತಂತ್ರಗೊಳಿಸುತ್ತದೆ
ಮಾನವನ ಬಾಳಿಗೆ ಆಸರೆಯಾಗುತ್ತವೆ

ಬದುಕಿಗೆ ನಡೆದದ್ದೇ ಹಾದಿ
ಅಡೆತಡೆಯಿಲ್ಲದ ಸ್ವತಂತ್ರ ಬೀದಿ
ಇಚ್ಛೆಗನುಗುಣವಾಗಿ ಸಾಗುತ್ತವೆ
ತನ್ನದೇ ಹಾದಿಯಲ್ಲಿ ಬೀಗುತ್ತದೆ

ಕಾಣಲಾಗದವರ ಕೈಗೊಂಬೆ ಈ ಬದುಕು
ಅನುಭವಿಸುವಂತಿಲ್ಲ ಈ ಸ್ವಾತಂತ್ರ್ಯ ಸರಕು
ಸದಾ ಅಂಜುತ್ತದೆ ಬದುಕಿನ ಗಳಿಗೆಗೆ
ನಿತ್ಯ ಸ್ವಾತಂತ್ರ್ಯದೆಡೆಗೆ ಹೊರಟವನ ನೆರಳಿಗೆ

ಅವಿನಾಭಾವದೊಲುಮೆ ಈ ಸ್ವಾತಂತ್ರ್ಯ
ಪರಸ್ಪರ ಬೆಸೆಯುವ ಕುಶಲ ತಂತ್ರ
ಹೊಂದಾಣಿಕೆಯ ಬಲೆ ನೇಯುತ್ತದೆ
ಮನ ಮನಗಳಲ್ಲಿ ವಿಲೀನವಾಗಿ
ಬೆಚ್ಚಗಿನ ಅನುಭವ ನೀಡುತ್ತದೆ

ಸ್ವಾತಂತ್ರ್ಯವೆಂಬುದು ಬದುಕಿನ ಸಾರ
ಅತಿಯಾದರೆ ಸ್ವೇಚ್ಛಾಚಾರ
ಸ್ವಾತಂತ್ರ್ಯವೆಂಬುದು ಮಾರಕ ಪ್ರಜ್ಞಾಹೀನರಿಗೆ
ಬೆರೆಯುತ್ತದೆ ಸ್ವಾತಂತ್ರ್ಯ ಬದುಕಿನೊಂದಿಗೆ
ಬದುಕುತ್ತದೆ ಬಹಿರಂಗವಾಗಿ ಜೀವನದೊಂದಿಗೆ.

* * *

# ಆ ಡ್ಯಾಫೋಡಿಲ್‌ಗಳು

ಇಂಗ್ಲಿಷ್ ಮೂಲ : ವಿಲಿಯಂ ವರ್ಡ್ಸ್‌ವರ್ತ್
ಅನು : ಎಲ್. ಗಿರಿಜಾ ರಾಜ್

ಬಾಂದಳದಲಿ ಮುಗಿಲೊಂದು ವಿಹರಿಸುವಂತೆ
ಎತ್ತರ ಬಹು ಎತ್ತರದಲಿ
ಗಿರಿಕಂದರಗಳು ಮೇಲೆ ತೇಲುವ ಹಾಗೆ
ಏಕಾಂಗಿ ನಾ ವಿಹರಿಸುತಿದ್ದೆ

ಒಮ್ಮೆಲೇ ಓ! ಒಮ್ಮೆಲೇ ಕಂಡೆ ಆ ಸಮೂಹ,
ಹೊಳೆವ ಹೊನ್ನ ಹಳದಿಯ ಡ್ಯಾಫೋಡಿಲ್‌ಗಳ ಮಹಾಸಮೂಹ!
ಸರೋವರದ ಸನಿಹದಲಿ, ವೃಕ್ಷಗಳ ಕೆಳಗೆ,
ತೆಳುಗಾಳಿಗೆ ತಲೆದೂಗುತ ನಲಿಯುತ್ತವೆ.

ಹಬ್ಬಿವೆ ಬಹುದೂರಕೂ, ಹೊಳೆಯುತ್ತಿವೆ ತಾರೆಗಳಂದದಿ
ಆಕಾಶಗಂಗೆಯಲಿ ಮಿನುಗುಟ್ಟುವ ನಕ್ಷತ್ರಗಳ ಹಾಗೆ
ಅನಂತಾನಂತವಾಗಿ, ಸಾಲೇ ಸಾಲಾಗಿ ಪಸರಿಸಿವೆ
ಕೊಳದ ಅಂಚಿನುದ್ದಕ್ಕೂ ದಶ ಸಹಸ್ರ ಸಂಖ್ಯೆಯಲಿ;
ಒಂದೆ ನೋಟಕೆ ದೃಶ್ಯ ವೈಭವವನ್ನೊದಗಿಸುತ್ತಾ
ಆಡುತ್ತಿವೆ ತಲೆದೂಗುತ ನವನವೋನ್ಮೇಷ ನರ್ತನ.
ಸರೋವರದ ಅಲೆಗಳೂ ತರಂಗರಂಗವಾಗಿ ನರ್ತಿಸಿದವು
ಆದರೇನು? ಉಕ್ಕಿ ಹರಿವ ಹರ್ಷದೊನಲಿನ ಆ ಸುಮ-
ನೃತ್ಯಕ್ಕೆ ಸರಿಸಾಟಿಯಾಗದೆ ಸೋತು ಹೋದವು
ಇಂಥ ಉಲ್ಲಾಸ ತರುವ ಜೊತೆಗಾರರಿರಲು
ಕವಿಯೊಬ್ಬ ಆಹ್ಲಾದಗೊಳ್ಳದಿರಲೆಂತು ಸಾಧ್ಯ?

ನೋಡು ನೋಡುತ್ತ ತಲ್ಲೀನನಾದೆ ಸೌಂದರ್ಯಾಸ್ವಾದದಲಿ ಮುಳುಗಿ,
ಯೋಚಿಸುವ ಶಕ್ತಿ ಕಳಕೊಂಡ ನನಗೆ ಆ ದೃಶ್ಯ ವೈಭವ
ದಕ್ಕಿಸಿದ ''ಅಲೌಕಿಕ ನಿಧಿ''ಯ ಅರಿವಿರಲಿಲ್ಲ ಆಗ;

ತದನಂತರ ಎಷ್ಟೋ ದಿನದವರೆಗೆ ಮತ್ತೆ......ಮತ್ತೆ.....
ನನ್ನ ತಲ್ಪದಲಿ ಮಲಗಿದ ಹೊತ್ತು, ನಿರ್ಲಿಪ್ತತೆಯೋ, ನಿರ್ವಿಣ್ಣತೆಯೋ ಮನದಿ ಮೂಡಿರಲು
ಓಹ್! ಆ ದೃಶ್ಯ ಸಂಪತ್ತು ನನ್ನ ಒಳಗಣ್ಣಿಗೆ ಗೋಚರಿಸಿ
''ಏಕಾಂತತೆಯ ಪರಮ ಸುಖ'' ಒದಗಿಸುತ್ತದೆ;
ಆ ನಂತರ ನನ್ನೆದೆ ಅತ್ಯಾನಂದದ ಭರದಲಿ,
ಆ ಡ್ಯಾಫೋಡಿಲ್‌ಗಳ ಜೊತೆ ಜೊತೆಯಾಗಿ ನರ್ತಿಸಲಾರಂಭಿಸುತ್ತದೆ.

* * *

# ಉಷಃ ಕಾಲದಲ್ಲಿ

ಇಟ್ಯಾಲಿಯನ್ ಮೂಲ : ಪೀಟರ್ ರಸ್ಸೆಲ್
ಅನು : ವಿ. ರಾಘವೇಂದ್ರ

ಉಷೆಯ ಈ ಕಾಲದ ಬೆಳಗಿನ ನಿಶ್ಶಬ್ದತೆಯ ಆ ಮನೆಯ ಮೌನದಲ್ಲಿ
ಇಬ್ಬನಿಯು ಹುಲ್ಲನ್ನು ತೋಯಿಸುತ್ತಿತ್ತು ಬಟ್ಟ. ಬಯಲಿನ ಬಾಳೆಯ ಗಿಡದ ಸಮೂಹದಲ್ಲಿ
ಆ ಕ್ಷಣ ಹಾದಿಯಲ್ಲಿ ಪಚ್ಚೆ ತೆನೆಯು ಹಸಿರು ಮಿಂಚಿ ಹರಡಿರುವುದನ್ನು ಕಂಡೆನಲ್ಲಿ
ಹೊತ್ತು ಮೀರಿದ್ದರೂ ವಸಂತ ಆ ಹೂಗಳಲ್ಲಿ ಬಣ್ಣದೊಂದಿಗೆ ಸ್ವೇಚ್ಛೆಯಾಗಿರುವನಲ್ಲಿ
ಆ ತಿಳಿಗೊಳದ ಮಡುವಿನಲ್ಲಿ ಹಂಸಗಳು ಅಡ್ಡಾಡುತ್ತಿರುವುದನ್ನು ಕಂಡೆನಲ್ಲಿ
ಬೆದರಿದ ಅವುಗಳು ನೀರಿನ ಮಧ್ಯದಲ್ಲಿ ಎತ್ತಲೂ ಗುಳು ಗುಳು ಶಬ್ದ ಮಾಡುತ್ತಿರುವಲ್ಲಿ
ಹೊಳೆವ ಕಲ್ಲಿನಲ್ಲೂ ಪ್ರತಿಫಲಿಸುತ್ತಿತ್ತು ಪ್ರಭೆ ಮೂಡಿ ಚೂರಾಗಿರುವ ಗಾಜಿನಲ್ಲಿ
ನಿರ್ಮಲವಾಗಿ ನಾನು ಚಿಂತಿಸತೊಡಗಿದೆ ನಾನು ಏನು ಮಾಡುವುದು ಎಂದು ಪ[illegible]ಸುತ್ತಿರುವಲ್ಲಿ?

[illegible]ವನ ಈ ಮಟ್ಟಿಗೆ ಎಲ್ಲರ ತೀವ್ರ ಯಾತನೆಯ ಕಡೆಗೆ ಅದು ಏಕಕಾಲದಲ್ಲಿ
ಇದನ್ನು ಪರೀಕ್ಷಿಸಲು ನನ್ನ ಅಂತಃಕರಣದೊಳಗೆ ಅವಾಸ್ತವಿಕ ರಾತ್ರಿಯಲ್ಲಿ
ನಡುಹಗಲಲ್ಲಿ ಪ್ರತಿಭಟಿಸಿ ಕಡೆಗೆ ಕುಗ್ಗಿ ನಿಂತುಕೊಳ್ಳಲು ತಲೆಯೆತ್ತಿ ಆಸ್ಥಾನವಲ್ಲಿ
ಇಂದು ದೃಢತೆಯಿಂದ ಮೇಲೇರಲು ಆಗಿರುವ ಯಾವುದಾದರೂ ಹೊತ್ತಿನಲ್ಲಿ
ನನ್ನ ಮನಸ್ಸಿನ ಬಹಿರ್ ದೃಷ್ಟಿಯಲ್ಲಿ ಮತ್ತೆ ಈಗಲೂ-ಆಗಲು ಎನ್ನುತ್ತಿರುವಲ್ಲಿ
ಸುಖವಾದ ಆನಂದದ ಕಡೆಗೆ ಅದು ಸಿದ್ಧಗೊಳಿಸುವ ನಾನು ಜೇಡಿಮಣ್ಣಿನಲ್ಲಿ

* * *

# ತೋಪ್ಪಿಲ್ ಮೀರಾನ್

ಈಗ ಐವತ್ತೈದು ವರ್ಷ ವಯಸ್ಸಾಗಿರುವ ತೋಪ್ಪಿಲ್ ಮೀರಾನ್ ಅವರು, ಒಂದು ಕಡಲೋರ ಗ್ರಾಮತ್ತಿನ್ ಕತ್ತೈ, ತುರೈಮುಖಂ, ಕೂನನ್ ತೋಪ್ಪು ಮತ್ತು ಸಾಯ್ವು ನಾರ್ಕಾಲಿ ಎಂಬ ನಾಲ್ಕು ಕಾದಂಬರಿಗಳನ್ನು ಬರೆದಿದ್ದಾರೆ. ಅದು ಮಾತ್ರವಲ್ಲ, ತಮಿಳು ಅನ್ಬುಕ್ಕು ಮುದುಮ್ಮೈ ಇಲ್ಲೈ, ತಂಗರಾಶು ಮತ್ತು ಅನಂತ ಶಯನಂ ಕಾಲನಿ ಎಂಬ ಮೂರು ಸಣ್ಣ ಕತೆಗಳ ಸಂಕಲನವನ್ನು ಹೊರತಂದಿದ್ದಾರೆ. ೧೯೯೭ರಲ್ಲಿ 'ಸಾಯ್ವು ನಾರ್ಕಾಲಿ' ಎನ್ನುವ ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ.

'ಅನಂತ ಶಯನಂ ಕಾಲನಿ' ಎಂಬ ಕಥಾಸಂಕಲನದಲ್ಲಿ ಮೊದಲನೆಯ ಕತೆಯೇ 'ಅನಂತ ಶಯನಂ ಕಾಲನಿ' . ಈ ಕತೆಯಲ್ಲಿ ಕಂಪ್ಯೂಟರ್ ಸೈನ್ಸ್ ವಿಷಯವನ್ನು ಓದಬೇಕೆಂದು ವಿದ್ಯಾರ್ಥಿಗಳು ಹಟ ಮಾಡುವುದು, ಅವರ ತಾಯಿ ತಂದೆಯರು ಪ್ರವೇಶಕ್ಕಾಗಿ ಅಲೆಯುವುದು ಮತ್ತು ವಿಳಾಸ ಇಲ್ಲದೇ ಒಂದು ಮನೆಯನ್ನು ಕಾಲನಿಯಲ್ಲಿ ಹುಡುಕುವಾಗ ಎದುರಾಗುವ ಕಷ್ಟಗಳ ಬಗ್ಗೆ ಯಥಾವತ್ತಾಗಿ ವರ್ಣಿಸಿದ್ದಾರೆ.

ಬುದ್ಧಿಜೀವಿಗಳಿಗೂ ಹಾಗೂ ಅಮಾಯಕ ಜನಗಳಿಗೂ ಇರುವ ಅರಿವಿನ ಅಂತರ, ತಿಳುವಳಿಕೆಯ ಸ್ವರೂಪ ಇವು ಕೂಡ ಈ ಕತೆಯಲ್ಲಿ ಸೂಕ್ಷ್ಮ-ವ್ಯಂಗ್ಯವಾಗಿ ಕಾಣಿಸಿಕೊಂಡಿವೆ.

* * *

# ಅನಂತ ಶಯನಂ ಕಾಲನಿ

ತಮಿಳು ಮೂಲ : ತೋಪ್ಪಿಲ್ ಮೀರಾನ್
ಅನು : ಡಾ॥ ಎ. ಶಂಕರಿ

ಅತಿ ರಭಸವಾಗಿ ಚಲಿಸುತ್ತಿದ್ದ ವಾಹನದಲ್ಲಿ ಬಲಗಡೆ ಕುಳಿತಿರುವಾಗ, ವೇಗವಾಗಿ ಓಡುವುದು ಮನುಷ್ಯರೇ ಅಥವಾ ವಾಹನವೇ ಎನ್ನುವ ಭ್ರಮೆ ಮನಸ್ಸಿನಲ್ಲಿ ಉಂಟಾಯಿತು. ನನ್ನಿಂದ ರಭಸವಾಗಿ ಹಾದು ಹೋಗುವ ಮೃಗಗಳನ್ನು, ಮರಗಳನ್ನು, ಮನುಷ್ಯರನ್ನು ನಾನು ದೃಷ್ಟಿಸಿ ನೋಡುತ್ತಿದ್ದೆನು. ಬೆಳೆದು ನಿಂತ ಗದ್ದೆ ಹಾಗೂ ಗೊನೆ ತುಂಬಿ ನಿಂತ ಬಾಳೆಯ ತೋಟಗಳು ಕ್ಷಣದಲ್ಲಿ ಮಿಂಚಿ ಮರೆಯಾಗುತ್ತಿದ್ದವು. ಬೀಸು ಗಾಳಿಯಲ್ಲಿ ಪತ್ರಿಕೆಯ ಚೂರು ತೇಲಾಡುತ್ತಿದ್ದು ದನ್ನು ನಾನು ಕಂಡೆನು. ನಾನು ಹುಡುಕಲು ಹೊರಟಿರುವ ಪ್ರೊ॥ ಶ್ರೀನಿವಾಸರವರ ಮನೆ ವಿಳಾಸ ಬರೆದಿದ್ದ ಚೀಟಿ ಕಸದ ಬುಟ್ಟಿಯಲ್ಲಿ ಬಿದ್ದಿರಬಹುದಾದ ಸಂಶಯ ಬಂದಿತು. ಪದವಿ ಪೂರ್ವ ತರಗತಿಯಲ್ಲಿ ತೇರ್ಗಡೆ ಹೊಂದಿದ್ದ ನನ್ನ ಮಗನ ಭವಿಷ್ಯದ ಚಿಂತನೆ ನನ್ನ ಮನಸ್ಸನ್ನು ಆಳವಾಗಿ ನಾಟಿತು.

''ಪ್ರೊ॥ ಶ್ರೀನಿವಾಸನ್ ಮನೆ ಯಾವುದು ಎಂದು ಕೇಳಿದರೆ, ಚಿಕ್ಕ ಮಗು ಹೇಳುತ್ತದೆ. ಸ್ವಾಮಿ!'' ಪ್ರಾಚಾರ್ಯರ ಸ್ನೇಹಿತರು ಆ ಹೊತ್ತು ಮಾತನಾಡುವಾಗ ಹೇಳಿದ ಮಾತು, ಒಂದು ಆಲದಮರದ ನೆರಳ ರೂಪದಲ್ಲಿ ಕಾಣಿಸಿತು. ಪ್ರಕಾಂಡ ಪ್ರಾಚಾರ್ಯರಾಗಿ ಬಾಗಿಲು ಸಂಖ್ಯೆ, ಬೀದಿ ಹೆಸರು ಅವಶ್ಯವಿಲ್ಲ ಎಂಬ ಸಮಾಧಾನ ಮನಸ್ಸಿಗೆ ಶಾಂತಿ ಕೊಟ್ಟಿತು. ಚಿಕ್ಕ ಮಕ್ಕಳಿಗೂ ಗೊತ್ತಿರುವಂಥ ಒಬ್ಬ ಪ್ರಾಚಾರ್ಯರ ಸ್ನೇಹಿತ ನಾನು ಎಂಬ ಅಭಿಮಾನ, ಅನಿಸಿಕೆ ನನ್ನಲ್ಲಿ ಕಾಣಿಸಿತು.

ಕಂಪ್ಯೂಟರ್ ಸೈನ್ಸ್ ಈಗ ಒಂದು ಆಕರ್ಷಣೀಯವಾದ ವಿಷಯ. ಪದವಿ ಪೂರ್ವ ಪರೀಕ್ಷೆಯಲ್ಲಿ ಪಾಸಾಗಿರುವ ನನ್ನ ಮಗನನ್ನು ಆಕರ್ಷಿಸಿತು ಎಂಬುದನ್ನು ಅವನ ಹಟದಿಂದ ನಾನು ಊಹಿಸಿದೆ.

ಕಂಪ್ಯೂಟರ್ ಸೈನ್ಸ್ ವಿಭಾಗ ಇರುವ ಕಾಲೇಜು ಮತ್ತು ಅದರ ವಿಭಾಗದ ಮುಖ್ಯಸ್ಥರು ಪ್ರೊ॥ ಶ್ರೀನಿವಾಸನ್ ನನ್ನ ಹಳೆಯ ಸ್ನೇಹಿತರು ಎಂಬುದನ್ನು ಅವನು ವಿವೇಚನೆ ಮಾಡಿ ತಿಳಿದುಕೊಂಡಿದ್ದನು. ಎಂಬುದು ನನಗೆ ಈಗಲೂ ಒಂದು ಕುತೂಹಲ.

ಹಲವಾರು ಮೈಲು ದೂರದಲ್ಲಿರುವ ನನ್ನ ಮಗನಿಗೆ ಆ ಪ್ರೊ॥ ಶ್ರೀನಿವಾಸನ್ ಮನೆ ಅನಂತ

ಶಯನಂ ಕಾಲನಿಯಲ್ಲಿ ಇದೆ ಎನ್ನುವುದು ಗೊತ್ತಾದ ಮೇಲೆ, ಬುದ್ಧಿವಂತರು, ಸರ್ಕಾರಿ ಅಧಿಕಾರಿಗಳು, ವೈದ್ಯರು, ಇಂಜಿನೀಯರುರು ಎಲ್ಲರೂ ಇರುವ ಆ ಕಾಲನಿಯಲ್ಲಿ, ತಂದೆ, ತಾಯಿಯರಿಗೆ, ಮಕ್ಕಳಿಗೆ ಖಂಡಿತವಾಗಿಯೂ ಗೊತ್ತಿರುತ್ತದೆ ಎಂದು ಅನಿಸಿತು. ಇವರಲ್ಲಿ ಅನೇಕರು ಪ್ರವೇಶಕ್ಕಾಗಿ ಇವರನ್ನು ಪ್ರತಿ ವರ್ಷ ಭೇಟಿ ಮಾಡಿದ್ದಾರೆ ಅಥವಾ ಅವರನ್ನು ಭೇಟಿ ಮಾಡಬೇಕು ಎಂಬ ಭಾವನೆ ಇಟ್ಟುಕೊಂಡು, ಪರಿಚಯ ಮಾಡಿಕೊಂಡಿರುತ್ತಾರೆ ಎಂದು ತಿಳಿದಿದ್ದೆ.

ಪ್ರಕಾಂಡ ಪಂಡಿತರ ಮನೆಯ ವಿಳಾಸ ಇಲ್ಲದಿದ್ದರೂ ಕಂಡುಹಿಡಿಯುವುದಕ್ಕೆ ಕಷ್ಟ ಇರುವುದಿಲ್ಲ ಎಂದು ಯೋಚನೆಮಾಡಿ ಬಸ್ಸಿನಲ್ಲಿ ಕುಳಿತುಕೊಂಡಿದ್ದೇನೆ. ಒಂದೇ ಕಾಲಿನಲ್ಲಿ ಹಟಮಾಡಿಕೊಂಡು ನಿಂತಿರುವ ನನ್ನ ಮಗನ ಮುಖ ಕಾಣಿಸಿತು. ಆಸೆಯಿಂದ ಪ್ರಕಾಶಿಸುವ ಅವನ ಕಣ್ಣುಗಳು, ಮನೆ ಬಿಟ್ಟು ನಾನು ಬರುವಾಗ ಅವನ ತುಟಿಯಿಂದ ಬಂದ ಮಾತು ''ನಾಳೆ ಆಯ್ಕೆ'' ಆ ಶಬ್ದ ನನ್ನನ್ನು ಆವಾಗ ಎಚ್ಚರಮಾಡಿತು.

ಬಸ್ಸಿನಿಂದ ಇಳಿದು ನಿಂತುಕೊಂಡಿರುವಾಗ ಬಿಸಿಲು ಭಯಂಕರವಾಗಿತ್ತು. ರಸ್ತೆಯಲ್ಲಿ ನಿಂತಿರುವಾಗ, ನಾನೇ ನಿಧಾನವಾಗಿ ಬಂದಿದ್ದೇನೆ ಎಂಬ ಭಯ ಮನಸ್ಸಿನಲ್ಲಿ ಉಂಟಾಯಿತು. ಅವರು ಯಾರು ಯಾರಿಗೋ ಮಾತು ಕೊಟ್ಟಿರುತ್ತಾರೋ ಎಂಬ ಸಮಸ್ಯೆ ಬಂತು.

ಅಲ್ಲಿ ಛತ್ರಿ ಹಿಡಿದುಕೊಂಡು ಬಂದ ಒಬ್ಬರ ಹತ್ತಿರ,

''ಸ್ವಾಮಿ ! ಅನಂತ ಶಯನಂ ಕಾಲನಿಗೆ ಹೋಗುವ ಬಸ್ಸು ಯಾವುದು'' ಎಂದು ಕೇಳಿದೆ.

''ಓಡಿ ಹೋಗಿ ! ಆ ಡ್ರೈವರ ಹತ್ತಿರುವ ೩೯ಬಿ; ಅದನ್ನು ಬಿಟ್ಟರೆ ಎರಡು ಗಂಟೆ ನಂತರ ಬೇರೆ ಬಸ್ಸು ಇರುವುದು ಎಂದರು. ಓಡುವ ಬಸ್ಸಿನಲ್ಲಿ ವಿದ್ಯಾರ್ಥಿಯಂತೆ ಸಂತೋಷದಿಂದ ಹತ್ತಿಬಿಟ್ಟೆ.

ಬಸ್ಸಿನಿಂದ ಇಳಿದಕೂಡಲೆ ಎದುರಿನಲ್ಲಿ 'ಅನಂತ ಶಯನಂ ಕಾಲನಿ' ಎಂಬ ಹೆಸರಿನ ಒಂದು ಬೋರ್ಡು ಕಾಣಿಸಿತು. ಅದಕ್ಕೆ ಲಗತ್ತಾಗಿ ಒಂದು ಟೀ ಅಂಗಡಿ. ಈ ಅಂಗಡಿಗೆ ಲಗತ್ತಾಗಿರುವ ಕಂಬಗಳ ಪೈಕಿ ಒಂದು ಕಂಬಕ್ಕೆ ಬಸ್ ನಿಲುಗಡೆ ತೋರಿಸುವ ಬೋರ್ಡು ತೂಗು ಹಾಕಲಾಗಿತ್ತು. ಈ ಬೋರ್ಡು ಅನಂತ ಶಯನಂ ಕಾಲನಿಯನ್ನು ಗುರುತಿಸಲು ತೂಗುಹಾಕಿದಂತೆ ತೋರಿತು.

ಪ್ರೊ॥ ಶ್ರೀನಿವಾಸನ್ ವಿಳಾಸವು ಈ ಟೀ ಅಂಗಡಿಯ ಮಾಲೀಕರಿಗೂ ಸಹ ಕೇಳಿದರೆ, ತಿಳಿಯುತ್ತಿತ್ತು.

'ಅಣ್ಣ ! ಪ್ರೊ॥ ಶ್ರೀನಿವಾಸರವರ ಮನೆ ಯಾವ ಕಡೆ ಇದೆ?' ಎಂದು ಕೇಳಿದೆ.

''ಪ್ರೊ॥ ಶ್ರೀನಿವಾಸನ್'' ಅಂಗಡಿ ಮಾಲೀಕರು ಸ್ವಲ್ಪ ಯೋಚಿಸಿ, ಆ ಮೀಸೆ ಇರುವ ಆಸಾಮಿ ತಾನೆ?'' ಎಂದರು.

''ಹೌದು''

''ಕಣ್ಣಿಗೆ ಕನ್ನಡಕ, ಸ್ವಲ್ಪ ಕೂದಲು ಇಲ್ಲದ ತಲೆ, ಕಪ್ಪು ಬಣ್ಣದ ಎತ್ತರವಾದ ಆಸಾಮಿ'' ಎಂದರು.

"ಹೌದು ಸಾರ್, ಅವರೇ" ಎಂದೆ. ಇಳಿದ ಜಾಗದಲ್ಲಿ. ಮನೆಯನ್ನು ಕಂಡುಹಿಡಿದ ಹರ್ಷ ಮನಸ್ಸಿನಲ್ಲಿ ಮತಾಪು ಹಚ್ಚಿದ ರೀತಿಯಲ್ಲಿ ಆಯಿತು. ಟೀ ಅಂಗಡಿ ಮಾಲೀಕರು, "ಅವರನ್ನು ನೋಡಿದ್ದೇನೆ. ಮನೆ ಇದೇ ಕಾಲನಿಯಲ್ಲಿ ಇದೆ. ಆದರೆ ಎಲ್ಲಿ ವಾಸಮಾಡುತ್ತಾರೆ ಎಂಬುದು ತಿಳಿಯದು ಎಂದ.

ಇದನ್ನು ಕೇಳಿದೊಡನೆ, ಮನಸ್ಸಿಗೆ ಕಸಿವಿಸಿ ಆಯಿತು. ಕಾಲನಿಯನ್ನು ಪ್ರವೇಶಿಸಿದೊಡನೆ, "ಬೀದಿಗಳನ್ನು ಅಶುದ್ಧ ಮಾಡಿದರೆ ಶಿಕ್ಷೆಗೆ ಗುರಿಪಡಿಸಲಾಗುವುದು" ಎಂಬ ಪ್ರಚಾರದ ಬೋರ್ಡನ್ನು ಕಂಡೊಡನೆ ಮನಸ್ಸಿಗೆ ಗಾಬರಿ ಆಯಿತು.

ಇಲ್ಲಿಯೇ ಮೂತ್ರ ವಿಸರ್ಜನೆ ಮಾಡಬೇಕಾಗಿತ್ತು. ಆದರೆ ಈ ಬೋರ್ಡನ್ನು ನೋಡಿ ಮನಸ್ಸಾಗಲಿಲ್ಲ. ಹಾಗೆಯೇ ಸುತ್ತಲೂ ಕಣ್ಣಾಡಿಸಿದಾಗ, ಬೀದಿಗಳು, ಮಹಡಿ ಕಟ್ಟಡಗಳು ಕಾಣಿಸಿದವು.

ಬೀದಿ ಪ್ರಾರಂಭವಾದೊಡನೆ, ಹಳದಿ ಬಣ್ಣದ ಸಿಮೆಂಟು ಹಲಗೆಗಳಲ್ಲಿ ಕಪ್ಪು ಅಕ್ಷರಗಳಲ್ಲಿ ಸಂಖ್ಯೆಗಳು ಎ-೧-೧೦೦, ಬಿ-೨೦-೬೦, ಈ ರೀತಿಯಲ್ಲಿ. ಕಾಣಿಸಿದಾಗ ಯಾವ ಬೀದಿಯಲ್ಲಿ ಮೊದಲು ನುಸುಳುವುದು ಎಂಬ ಪ್ರಶ್ನೆ ಮನಸ್ಸಿನಲ್ಲಿ ಮೂಡಿತು. ಹಾಗೆಯೇ ನೋಡಿದಾಗ ಬೀದಿಗಳಲ್ಲಿ ಯಾರೂ ಕಾಣಿಸದೆ ಖಾಲಿಯಾಗಿತ್ತು.

ಹಾಗೆಯೇ ಮನಸ್ಸಿಗೆ ತೋಚಿತು, ಈ ಹಿಂದೆ ಮಕ್ಕಳು ಬೀದಿಯಲ್ಲಿ ಕ್ರಿಕೆಟ್ ಆಟ ಆಡುವಾಗ, ಬೀದಿಯಲ್ಲಿ ಯಾಕೆ ಕೂಗಾಡಿ ಗಲಾಟೆ ಮಾಡುತ್ತೀರಿ? ಮನೆಗೆ ಹೋಗಿ ಪಾಠಗಳನ್ನು ಯಾಕೆ ಓದಬಾರದು ಎಂದೆಲ್ಲಾ ದಂಡಿಸಿದ್ದು ನೆನಪಿಗೆ ಬಂದಿತು.

ಹಾಗೆಯೇ ಈ ಕಾಲನಿಯಲ್ಲಿ ಯಾವುದೇ ಬೀದಿಯಲ್ಲಿ ಮಕ್ಕಳು ಕ್ರಿಕೆಟ್ ಆಡುತ್ತಿದ್ದಾರೋ ಎಂಬ ಸಂಶಯ ಮನಸ್ಸಿನಲ್ಲಿ ಮೂಡಿತು. ಆದರೆ ಜನಗಳ ಚಲನವಲನಗಳು ಕಾಣದೆ, ಅಲ್ಲಿಯ ಮನೆಗಳಲ್ಲಿ ಜನರು ವಾಸಿಸುತ್ತಿದ್ದಾರೋ ಇಲ್ಲವೋ ಎಂದೂ ಮನಸ್ಸಿನಲ್ಲಿ ತೋರಿತು.

ಹಾಗೆಯೇ ಯೋಚಿಸುತ್ತ, 'ಎ' ಸಂಖ್ಯೆಯ ಬೀದಿಯಲ್ಲಿ ಕಾಲುಗಳು ನಡೆಯತೊಡಗಿದವು. ಮನೆಗಳ ಬಾಗಿಲುಗಳನ್ನು ಕಣ್ಣಾಡಿಸಿಕೊಂಡು ಹೋಗುತ್ತಿರುವಾಗ ಹೆಸರುಗಳುಳ್ಳ ಬೋರ್ಡು-ಹೆಸರುಗಳು ಇಲ್ಲದ ಬೋರ್ಡುಗಳು ಕಾಣಸಿಕೊಂಡವು. ಆದರೆ ಯಾವ ತಲೆಗಳೂ ಹೊರಗಡೆ ಕಾಣಿಸಲಿಲ್ಲ. ಹಾಗೆಯೇ ನಡೆದು ಹೋಗುತ್ತಿರುವಾಗ ಬೀದಿಯ ಕೊನೆಯಾಗಿ, "ಬಿ" ಅಥವಾ "ಸಿ" ಬೀದಿಗಳು ಕಾಣಿಸಿ, 'ಬಿ' ಬೀದಿಗೆ ನುಸುಳಿದೆನು. ಹಾಗೇ ಬೀದಿಯಲ್ಲಿ ನಡೆದು ಹೋಗುತ್ತಿರುವಾಗ, ಒಂದು ತಲೆ 'ತುರುಬು' ಕಾಣಿಸಿತು. ಅದನ್ನು ಕಂಡೊಡನೆ, 'ಅಮ್ಮ' ಎಂದು ಕೂಗಿದೆ. ತಲೆಬಾಗಿಲಿಗೆ ದೊಡ್ಡದಾದ ಬೀಗ ಹಾಕಿತ್ತು. "ಪ್ರೊ॥ ಶ್ರೀನಿವಾಸನ್‌ರವರ ಮನೆ.... ಅದೇನಾ" ಎಂದೆ. "ಗ್ಗೊತ್ತಿಲ್ಲಾ" ಎಂದು ತಟ್ಟನೆ ಒಳಗೆ ಹೋಗಿ ಬಾಗಿಲು ಹಾಕಿಕೊಂಡಳು.

'ಹೋಗುತ್ತಾಳೆ ಅವಳು' ಎಂದು ಬೇಸರಮಾಡಿಕೊಂಡು 'ಬಿ' ಬೀದಿಗೆ ಬಂದಾಯಿತು. ಎರಡು ಗಜ ಸಾಗಿದ ನಂತರ, ಪುನಃ ಬೀದಿ ಕವಲಾಗಿ 'ಸಿ-ಡಿ' ಬೀದಿಗಳು ಎದುರಾದವು.

ಯಾವ ಬೀದಿಗೆ ನುಸುಳುವುದು? ಎಂದು ಮನಸ್ಸಿನಲ್ಲಿ ಗೊಂದಲ ಉಂಟಾಗಿ, 'ಸಿ' ಬೀದಿಗೆ

ನುಸುಳಿದೆನು. ಹಾಗೆಯೇ ಬೀದಿಯಲ್ಲಿ ನಡೆದು ಬರುವಾಗ ಎರಡೂ ಕಡೆಗಳಲ್ಲಿ ಹೆಸರಿನ ಫಲಕಗಳನ್ನು ಓದಿಕೊಂಡು ಬಂದೆ.

ಮುಚ್ಚಿದ ಬಾಗಿಲುಗಳು; ಕೆಲವು ಕಡೆ ಕಬ್ಬಿಣದ ಬಾಗಿಲುಗಳ ಮೇಲೆ ನಾಯಿ ಚಿತ್ರಗಳು ಹಾಕಿದ್ದವು.

ಹೀಗೆ ವಿಳಾಸ ದೊರೆಯದೆ, ಮನಸ್ಸು ಬೇಜಾರಾಗಿ, ಈ ಶ್ರಮಗಳು ವ್ಯರ್ಥವಾಗಿ ಬೇರೆ ದಾರಿಯಿಲ್ಲ ಎಂದು ತೀರ್ಮಾನಕ್ಕೆ ಬಂದೆನು.

ಹಾಗೇ ಕಾಲು ಎಳೆಯುತ್ತ ಹೋಗುತ್ತಿರುವಾಗ, ಸ್ವಲ್ಪ ದೂರದಲ್ಲಿ ಒಂದು ಕಬ್ಬಿಣದ ಬಾಗಿಲು ತೆರೆದಿತ್ತು. ಒಂದು ಹೀರೋ ಹೋಂಡ ಗಾಡಿಯನ್ನು ಹೊರಗಡೆ ಯಾರೋ ತರುತ್ತಿದ್ದರು. ಅದನ್ನು ಕಂಡು ಜೀವ ಬಂದಂತಾಗಿ, ನೋಡಿದಾಗ, ಸುಂದರವಾದ ಒಬ್ಬಾಕೆಯು ಬಾಗಿಲಿಗೆ ಬೀಗ ಹಾಕಿಕೊಂಡಳು.

ಅವರು ಗಾಡಿಯನ್ನು 'ಸ್ಟಾರ್ಟ್' ಮಾಡುವ ಕ್ಷಣದಲ್ಲಿ ಓಡಿ, ಅವರ ಪಕ್ಕದಲ್ಲಿ ನಿಂತೆ.

''ಸ್ವಾಮಿ, ಪ್ರೊ॥ ಶ್ರೀನಿವಾಸನ್ ಮನೆ?''

'ಗೊತ್ತಿಲ್ಲ' ನನ್ನ ಮುಖ ಕೂಡ ನೋಡಲಿಲ್ಲ.

ಹೇಳಿರುವುದನ್ನು ಕೇಳಿಸಿಕೊಂಡರೋ?

ಗೊತ್ತಿಲ್ಲ. ನನ್ನ ಮೂಗಿನಲ್ಲಿ ಕಪ್ಪು ಹೊಗೆಯನ್ನು ತುಂಬಿಸಿಬಿಟ್ಟು ಹೊರಟುಹೋದರು.

ಆ ಹೊಗೆಯನ್ನು ಶ್ವಾಸ ಕುಡಿಯಬೇಕಾಯಿತು. ಶ್ವಾಸನಾಳದಲ್ಲಿ ತುಂಬಿರುವ ಆ ಹೊಗೆಯನ್ನು ಸೀನಿ, ಸೀನಿ ಹೊರಗಡೆ ಕಳಿಸಿ ನಡೆದನು.

ಮರಗಳೇ ಇಲ್ಲದ ಬೀದಿ ಬದಿಯಲ್ಲಿ, ನನ್ನ ತಲೆ ಎರಡು ಭಾಗಗಳಾಗಿ ಒಡೆದು ಹೋಗುವಂತೆ ಕಾಣಿಸಿತು. ಅದೇ ಜಾಗದಲ್ಲಿ ಬೀದಿಯೂ ಕೂಡ 'ಡಿ' 'ಸಿ' ಎಂದು ಎರಡು ಭಾಗಗಳಾಗಿತ್ತು.

ಒಂದು ಎರಡು ಮಹಡಿ ಕಟ್ಟಡದ ನೆರಳು ಬೀಳುವ ಬೀದಿ ಬದಿಯಲ್ಲಿ ನಿಂತು ನಿಟ್ಟುಸಿರು ಬಿಟ್ಟು, ಕಣ್ಣಮುಂದೆ ಕಾಣಿಸುತ್ತಿರುವ ಮನೆ ಸಂಖ್ಯೆಯನ್ನು ಓದಿದೆ. ಡಿ-೭೯. ಮನೆ ಒಳಗಡೆ ಒಬ್ಬರು ಕುಳಿತು ಇಂಗ್ಲಿಷ್ ಪತ್ರಿಕೆಯನ್ನು ಓದುತ್ತಿದ್ದರು. ಅವರ ತೊಡೆಯಲ್ಲಿ ಒಂದು ತುಂಬುಕೂದಲ ನಾಯಿ ಕುಳಿತುಕೊಂಡಿತ್ತು.

ಮನೆ ಆವರಣದಲ್ಲಿರುವ ಕಬ್ಬಿಣದ ಬಾಗಿಲಲ್ಲಿ ಬಂದು ದೊಡ್ಡ ಬೀಗ ನೇತಾಡಿಕೊಂಡಿತ್ತು.

ಇವರನ್ನು ಕೇಳಿ ನೋಡೋಣ ಎಂದು ಮೆಲ್ಲಗೆ ಬಾಗಿಲಿಗೆ ಹೋದೆ. ಬಿಚ್ಚಿಕೊಂಡಿರುವ ಮೂರು ನಾಯಿಗಳು ಹಲವು ದಿಕ್ಕುಗಳಿಂದ ಜಿಗಿದು ಬಂದವು, ಅವರ ತೊಡೆಯಲ್ಲಿ ಇರುವುದೂ ಸೇರಿ. ಕಿವಿ ಒಡೆದು ಹೋಗುವ ತರ ಬೊಗಳುತ್ತಿದ್ದವು. ಎತ್ತರವಾದ ಕಬ್ಬಿಣದ ಬಾಗಿಲು, ನನ್ನನ್ನು ಕಚ್ಚಿ ಚೂರು ಚೂರಾಗಿಸುವುದಕ್ಕೆ ತಡೆಯಾಗಿತ್ತು.

''ಸ್ವಾಮಿ''- ಎನ್ನುವ ನನ್ನ ಶಬ್ದವನ್ನು ಕೇಳಿ ಅವರು ತಮ್ಮ ಮುಖವನ್ನು ತಿರುಗಿಸಿದರು.

ಪ್ರೊ॥ ಶ್ರೀನಿವಾಸನ್ ಮನೆ.....?

'ಗೊತ್ತಿಲ್ಲ' ಎಂದು ಹೇಳಿ, ಪತ್ರಿಕೆಯ ಬಣ್ಣದ ಪುಟಗಳನ್ನು ಓದತೊಡಗಿದರು.

ಎರಡು ಮೂಳೆಗಳಂತೆ ಡಿ- ಯಿಂದ 'ಬಿ', 'ಎ' ಎಂಬ ಎರಡು ಬೀದಿಗಳು ಬಂದವು. ಬಿ, ಎ ಹಾಳಾಯಿತು.

ಈ ಅನಂತ ಶಯನಂ ಕಾಲನಿಗೆ ಮುಕ್ತಾಯ ಇಲ್ಲವೋ?

ಚಿಕ್ಕಮಗು ಕೂಡ ಹೇಳುತ್ತದೆ! ಕಣ್ಣಿಗೆ ಯಾವುದೂ ಮಗು ಬೀಳಲಿಲ್ಲ ಎನ್ನುವ ಕೋಪ ಮನಸ್ಸಿನಲ್ಲಿ ಬರುತ್ತಿದ್ದಿತು.

'ಡಿ'ಯಿಂದ 'ಬಿ'-ಗೆ ಬರುವಾಗ ಗಂಟಲಿನಲ್ಲಿ ಇದ್ದ ಕೊನೆಯ ಹನಿ ತೊಟ್ಟೂ ಇಂಗಿ ಹೋಯಿತು. ಈಗ ಬೇಕಾಗಿರುವುದು ಪ್ರೊಫೆಸರ್ ಮನೆಯಲ್ಲಿ ಒಣಹೋಗಿರುವ ನನ್ನ ಗಂಟಲಿಗೆ ಒಂದು ಲೋಟ ನೀರು. ಬೆವರಿನಿಂದ ತುಂಬಿರುವ ನನ್ನ ಮುಖವನ್ನು ಪಂಚೆ ಕೊನೆಯಿಂದ ಒರೆಸಿದೆ. ಅಲ್ಲಿ ಒಂದು ಮನೆಯಿಂದ ನೀರು ಬೀದಿಗೆ ಹರಿದು ಬರುವುದು ನೋಡಿದೆ. ಆ ಮನೆಯಲ್ಲಿ ಇರುವ ಹೆಸರು ಹಲಗೆ (ಎಸ್. ಕೆ.ಶಂಕರ್, ಐ.ಎ.ಎಸ್.) (ನಿವೃತ್ತಿ)ಯನ್ನು ಕಣ್ಣುಗಳು ನೋಡಿದವು. ಅವರ ಮನೆಯ ನಲ್ಲಿಯಿಂದ ನೀರು ಅತಿ ವೇಗವಾಗಿ ಹೊರಗಡೆ ಬರುತ್ತಿತ್ತು.

''ಸ್ವಾಮಿ''

ಒರಗುಛೇರಿನಲ್ಲಿ ಕುಳಿತುಕೊಂಡಿದ್ದ ಅವರು ನನ್ನನ್ನು ನೋಡಿ,

''ಯಾರು, ಏನು ಬೇಕು?'' ಎಂದು ಕಠೋರವಾಗಿ ಪ್ರಶ್ನಿಸಿದರು. ಅವರ ನೋಟದಲ್ಲಿ ನಾನೊಬ್ಬ ಕಳ್ಳ ಎನ್ನುವ ತರಹ ನಿಂತುಕೊಂಡೆ.

''ಕುಡಿಯಲು ಸ್ವಲ್ಪ ನೀರು......

''ಬೇರೆ ಎಲ್ಲಿಯಾದರೂ ಕೇಳಿ ನೋಡಿ''.......

''ಸರಿ, ಸ್ವಾಮಿ, ಪ್ರೊಫೆಸರ್..........''

ಗಂಟಲು ಸಿಕ್ಕಿಕೊಂಡಿರುವ ನನ್ನ ಧ್ವನಿ ಕಿವಿಗೆ ಬೀಳದೆ, ಚೇರಿನಿಂದ ಎದ್ದು ಒಳಗೆ ಹೋದರು. ನಾನು ನಡೆಯುತ್ತಿರುವುದು ಭೂತಗಳು ಇರುವ ಮನೆಗಳ ಸಾಲಿನಲ್ಲಿ, ಪಾಳುಭೂಮಿಯಲ್ಲಿ ಎನಿಸಿತು. ಘಂಟೆ ತಿಳಿದುಕೊಳ್ಳುವುದಕ್ಕಾಗಿ ಆಕಾಶವನ್ನು ನೋಡಿದೆ. ಸೂರ್ಯ ಆಕಾಶದಲ್ಲಿ ಕಾಣಿಸುತ್ತಿಲ್ಲ. ಆ ತಾಪ ನನ್ನ ಕಣ್ಣುಗಳನ್ನು ಉರಿಸುತ್ತಿತ್ತು.

ಉರಿಯುತ್ತಾ ಇದ್ದ ನನ್ನ ಕಣ್ಣುಗಳ ಎದುರಿಗೆ ಅಲ್ಲಿ ಬರುತ್ತಿರುವ ಮುದುಕನ ತೋಳಿನಲ್ಲಿರುವ ಕೆಂಪು ಬಾಳೆಗೊನೆ ಕಾಣಿಸಿತು. ಆ ಮುದುಕನ ಕಾಲು ಮಂಡಿಯತನಕ ಕೊಳೆ ಅಪ್ಪಿಕೊಂಡಿತ್ತು. ಆ ಬಾಳೆ ನನಗೆ ಹಸಿವಿನ ಹುಲಿಯನ್ನು ಬಿಟ್ಟ ಹಾಗೆ ಆಯಿತು.

''ಅಜ್ಜಾ'' ನನ್ನ ನೋಟ ಕೆಂಪುಬಾಳೆಯನ್ನು ನೋಡಿ ನಾಲಿಗೆಯಿಂದ ಎಂಜಲು ಹೊರ ಬಂತು.

''ಅಮ್ಮ!'' ಎಂದು ಸಮಾಧಾನದಿಂದ ಮುದುಕ ಗೊನೆಯನ್ನು ತೋಳಿನಿಂದ ಕೆಳಗೆ ಇಳಿಸಿದನು.

ಮಾರಲಿಕ್ಕಾ?

'ಇಲ್ಲಾ' ಮುದುಕನ ಮುಖ ಬಾಡಿ ಸೋತಂತೆ ಕಾಣಿಸಿತು.

ಅವನು ಹೇಳಿದ, 'ಮಗು, ಕಲೆಕ್ಟರ್ ಆಫೀಸಿನಲ್ಲಿ ಕೆಲಸ ಮಾಡುವ ಪಾರ್ವತಿಯವರ ಮನೆ ಎಲ್ಲಿ? ಹೇಳು, ಮಗು. ಬೆಳಿಗ್ಗೆಯಿಂದ ನಾಯಿಯ ತರ ಅಲೆಯುತ್ತಿದ್ದೇನೆ.

ಕಂಪ್ಯೂಟರ್ ಸೈನ್ಸ್ ವಿಷಯ ಸೇರುವುದಕ್ಕಾಗಿ ಬೆಳಗಿನ ತನಕ ನಿದ್ದೆ ಮಾಡದೆ ಓದಿ ಪಾಸಾಗಿರುವ ನನ್ನ ಮಗನ ಮುಖ ನನ್ನ ಮನಸ್ಸಿನಲ್ಲಿ ಬಂತು.

ನನ್ನ ಮಗನಿಗಾಗಿ ಪ್ರೊಫೆಸರ್ ಮನೆಯನ್ನು ಕಂಡುಹಿಡಿಯುವುದೋ ಅಥವಾ ಮುದುಕ ಹುಡುಕಿ ಬಂದಿರುವ ಮನೆಯನ್ನು ಕಂಡುಹಿಡಿಯುವುದಕ್ಕೆ ಸಹಾಯಮಾಡುವುದೋ?

'ಯಾಕೆ ಮಾತಾಡಲ್ಲ?'

'ಗೊತ್ತಿಲ್ಲಾ'.

''ಯಾರ ಹತ್ತಿರ ಹೇಳಿದರೂ ಗೊತ್ತಿಲ್ಲಾ, ಗೊತ್ತಿಲ್ಲಾ. ಅವಳು ನನ್ನ ಮೊಮ್ಮಗಳು. ನಾನು ಅವಳ ವಿಳಾಸ ಬರೆದುಕೊಡು ಎಂದು ಹೇಳಿದಾಗ, ಬೇಡಿ ಅಜ್ಜಾ. ಅಲ್ಲಿ ಹೇಳಿದರೆ ಚಿಕ್ಕ ಮಗು ಕೂಡ ಹೇಳಿಕೊಡುತ್ತದೆ'' ಎಂದಳು.

'ಇದು ನನ್ನ ಹಣೆಬರ'

'ಇಲ್ಲಿ ಎಲ್ಲಿಯಾದರೂ ಸ್ವಲ್ಪ ಕುಡಿಯುವುದಕ್ಕೆ ನೀರು ಸಿಗುತ್ತದೆಯಾ?

ಈ ಮರಳುಭೂಮಿಯಲ್ಲಿ ನೀರು ಎಲ್ಲಿ ಸಿಗುತ್ತೆ?

ನನ್ನ ಮೊಮ್ಮಗಳು ಬಸುರಿಯಾಗಿದ್ದಾಳೆ ಎಂದು ಈ ಬಾಳೆಗೊನೆಯನ್ನು ಹೊತ್ತುಕೊಂಡು ಬಂದಿರುವುದೇ ನನ್ನ ಅವಸ್ಥೆ.

''ಅಜ್ಜಾ''

'ನಿನಗೆ ಹಸಿವು ಆಗುತ್ತಿದೆಯ?'

ನನ್ನ ಕಣ್ಣಾಲಿಗಳು ಅದನ್ನು ನೋಡುತ್ತಿದ್ದವು.

ಹಸಿವಾಗುತ್ತಿದೆ.

'ಇಲ್ಲಿದೆ, ತೆಗೆದುಕೊಂಡು ತಿನ್ನು'.

'ಮೊಮ್ಮಗಳಿಗೆ',

'ಅವಳು ಅಲ್ಲಿಯೇ ಇರಲಿ ಬಿಡಿ, ನನ್ನನ್ನು ನಾಯಿಯಂತೆ ಅಲೆದಾಡಿಸಿದಳು.'

ಮಿಕ್ಕಿದ ಹಣ್ಣುಗಳನ್ನು ಎತ್ತಿ ತೋಳಿನಲ್ಲಿ ಇಟ್ಟುಕೊಂಡು ಮುದುಕ ನಡೆದರು. ನಾನು ಅವರ ಹಿಂದೆ ಹೋದೆನು. ಹಿಂದೆ ಹೋಗುತ್ತಿರುವಾಗ ನನ್ನ ತಲೆ ಬಗ್ಗಿತ್ತು. ಒಂದು ದುಃಖದ ನೆರಳು ನನ್ನ ಹಿಂದೆ ಬರುವ ತರಹ ಯಾವುದೋ ಸತ್ತುಹೋಗಿರುವ ದುಃಖದ ಮೌನ ಅನಂತ ಶಯನಂ ಕಾಲನಿಯನ್ನು ಸುತ್ತಿಕೊಂಡಿತ್ತು.

ನನ್ನ ಮನಸಿಗೆ ನಾನು ಏನು ಉತ್ತರ ಹೇಳುವುದು!

ಏ! ಹಣ್ಣು ಮಾರುವವನೇ, ಹಣ್ಣು ಏನು ಬೆಲೆ?

ಧ್ವನಿ ಕೇಳಿದ ಮೇಲೆ, ಮುದುಕ ನಿಂತು ಬಿಟ್ಟರು. ನಾನು ಕೂಡ . ಮಹಡಿಯಲ್ಲಿ ನಿಂತುಕೊಂಡಿರುವ ಅವಳನ್ನು ಮುದುಕ ನೋಡಿದನು.

'ಹಣ್ಣಾ? ಐವತ್ತು ಪೈಸಾ.'

ಹತ್ತು ಹಣ್ಣು ಕೊಡಿ.

ಅವಳು ಇಳಿದು ಬಂದಳು.

ಕೊಬ್ಬು ತುಂಬಿದ ಅವಳನ್ನು ಮುದುಕ ನೋಡಿದ.

ಎಷ್ಟು ದುಡ್ಡು ಇಟ್ಟುಕೊಂಡಿದ್ದೀಯಾ?

'ಐದು ರೂಪಾಯಿ'

'ಐದು ರೂಪಾಯಿಗೆ ಒಂದು ಹಣ್ಣು ಮಾತ್ರ ಕೊಡುತ್ತೇನೆ. ' ಮನುಷ್ಯರಿಗೆ ಮಾತ್ರ ಐವತ್ತು ಪೈಸೆಗೆ ಕೊಡುತ್ತೇನೆ. ಐವತ್ತು ಪೈಸೆ ಮಾತ್ರ ಎತ್ತಿಕೊಂಡು ಹಣ್ಣನ್ನು ಮುಟ್ಟಲು ಬಂದಿಬಿಟ್ಟೆಯಾ. ನಮಗೆ ಗೊತ್ತಿಲ್ಲದಿರುವ ಯಾವುದೋ ಜಾಗ ಎಲ್ಲಿ ಎಂದು ಕೇಳಿದರೆ, ಹೇಳುವುದಕ್ಕೆ ನಿನಗೆ ನಾಲಿಗೆ ಬರುವುದಿಲ್ಲ. ಐದು ರೂಪಾಯಿಗೆ ಇರುವ ಹಣ್ಣುಗಳನ್ನು ಐವತ್ತು ಪೈಸೆಗೆ ತೆಗೆದುಕೊಂಡು ಹೋಗಲು ಬಂದು ಬಿಟ್ಟೆಯಾ?

ಅಜ್ಜಾ, ಏನೂ ಹೇಳಬೇಡ, ಸರ್ಕಾರದ ಅಧಿಕಾರಿಗಳು ಮತ್ತು ಹಣವಂತರು ವಾಸಮಾಡುವ ಜಾಗವಿದು ಎಂದು ನಾನು ಬೇಡಿಕೊಂಡೆನು. ನಾಯಿಯನ್ನು ಬಿಚ್ಚಿಬಿಡುವರೋ ಎಂದು ಭಯ ನನಗೆ.

'ಯಾರಾದರೆ ನನಗೆ ಏನು?' ಮುದುಕನ ಮುಖವು ಕೆಂಪಾಗಿ ಅರಳಿತು. ಕಣ್ಣುಗಳಲ್ಲಿ ಕೋಪ ಹಬ್ಬಿತು.

'ನಾನು ಎಲ್ಲೆಲ್ಲಿ ಅಲೆದೆ ಅಂತ ನನಗೆ ಮಾತ್ರ ಗೊತ್ತು' ಎಂದು ಹೇಳಿ ಮುದುಕ ನನ್ನನ್ನೂ ಕೋಪದಿಂದ ನೋಡಿ, ಬೇಗ ಬೇಗ ನಡೆದನು.

'ಅಜ್ಜಾ!'

'ನಿನ್ನ ಕೆಲಸವನ್ನು ನೋಡು' ಎಂದ ಅವನ ಕೂಗನ್ನು ಕೇಳಿ, ನಾನು ಹೆದರಿದೆ.

ನನ್ನ ಮನಸ್ಸಿನಲ್ಲಿ ತುಂಬ ಭಾರವನ್ನು ಹೊತ್ತು ಟೀ ಅಂಗಡಿಗೆ ಬಂದೆನು. ಟೌನ್ ಬಸ್ ಬರುವ ರಸ್ತೆ ಪಕ್ಕದಲ್ಲಿ ಕುಳಿತುಕೊಂಡಿದ್ದ ಮುದುಕ ಕೈಯಲ್ಲಿ ಹಣ್ಣುಗೊನೆ ಇರಲಿಲ್ಲ!

'ಅಜ್ಜಾ! ಹಣ್ಣು?'

'ದಾರಿಯಲ್ಲಿ ಹೋದ ಚಿಕ್ಕ ಮಕ್ಕಳಿಗೆ ಕಿತ್ತು ಕೊಟ್ಟೆ.'

ಟೌನ್ ಬಸ್ಸ್‌ನಲ್ಲಿ ಹತ್ತಿರ ಕುಳಿತುಕೊಂಡಿರುವಾಗ, ಮುದುಕ ತಂಪಾಗಿ ನಿಧಾನವಾಗಿ ಹೇಳಿದರು.

'ಮಗನೆ! ನನ್ನ ಊರಿಗೆ ರಸ್ತೆ ಇಲ್ಲ, ಒಂದು ಸೇತುವೆ ಹಾಕಿದರೆ ರಸ್ತೆ ಬರುತ್ತೆ. ದೋಣಿಯಲ್ಲಿ ಹತ್ತಿ ಆ ಕಡೆ ಹೋಗಿ, ಒಂದು ಮೈಲು ನಡೆದುಕೊಂಡು ಹೋಗಿ ಆಮೇಲೆ ಕಾರಿನಲ್ಲಿ ಹತ್ತಿ ಹೋಗಬೇಕು. ನಾನು ಓದಿಲ್ಲ. ಆದರೆ ಯಾರ್‍ಯಾರು ಎಲ್ಲೆಲ್ಲಿದ್ದಾರೆ ಎಂದು ನನಗೆ ಗೊತ್ತಿರುತ್ತೆ. ಈಗ ನಾನು ಏನು ಹೇಳುತ್ತಿದ್ದೇನೆ ಎಂದು ನಿನ್ನ ಮನಸ್ಸಿಗೆ ಗೊತ್ತಾಯಿತಾ? ಟೌನ್ ಬಸ್ಸಿನಿಂದ ಇಳಿದು ಇಬ್ಬರೂ ಎರಡು ಕಡೆಗೆ ಬೇರೆ ಬೇರೆ ದಾರಿಯಲ್ಲಿ ಹೋದೆವು.

ನಾನು 'ಪಾಯಿಂಟ್ 'ಟು' ಪಾಯಿಂಟ್' ಬಸ್ಸಿನಲ್ಲಿ ಹತ್ತಿದೆನು. ಬಸ್ ವೇಗವಾಗಿ ಹೋಯಿತು.

ರಾತ್ರಿ ಎಲ್ಲರೂ ನಿದ್ದೆ ಮಾಡುವ ಸಮಯದಲ್ಲಿ ನಿದ್ದೆ ಮಾಡದೆ ಇದ್ದ ಮಗನು ಓಡಿ ಬಂದು ಸಂತೋಷದಿಂದ ಕೇಳಿದನು.

ಅಣ್ಣ! ಪ್ರೊಫೆಸರನ್ನು ನೋಡಿ ಹೇಳಿದಿರಾ?

ಅವನ ಮುಖದಿಂದ ನನ್ನ ಮುಖವನ್ನು ತಿರುಗಿಸಿಕೊಂಡೆ. ನಾನು ನನ್ನ ಕೋಣೆಯ ಕಡೆಗೆ ನಡೆದುಕೊಂಡು ಹೋಗುವಾಗ ನಾನು ಉತ್ತರ ಕೊಡದೇ ಹೋದಾಗ ಅವನು ನನ್ನ ಹಿಂದೆ ಬಂದನು. 'ಹೇಳಿದ್ದೇನೆ' ಎಂದು ಹೇಳುವಾಗ ಒಂದು ಮುಳ್ಳು ನನ್ನ ಹೃದಯದಲ್ಲಿ ಚುಚ್ಚಿತು. ಸಂತೋಷದಿಂದ ಒಂದು ರಾಗವಾಗಿ ಹಾಡಿಕೊಂಡೆ. ನನ್ನ ಮಗನು ಮಂಚದಲ್ಲಿ ಒರಗಿದ್ದನು.

ಮೇಜಿನ ಡ್ರಾಯರ್ ಎಳೆದು ನೋಡುವಾಗ ಪ್ರೊಫೆಸರ್ ಶ್ರೀನಿವಾಸರ ವಿಳಾಸ ಬರೆದುಕೊಟ್ಟಿರುವ ಚಿಕ್ಕ ಕಾಗದವನ್ನು ಹುಡುಕಿ ತೆಗೆದೆ.

ಡಿ-೯೦, ಅನಂತ ಶಯನಂ ಕಾಲನಿ.

ಮೂರು ನಾಯಿಗಳನ್ನು ಬಿಚ್ಚಿಬಿಟ್ಟಿದ್ದ ಬುದ್ಧಿಜೀವಿ ಅವರ ಮನೆ ಹತ್ತಿರ ಇರುವ ಎರಡು ಮಹಡಿಯ ಕಟ್ಟಡ ಅದು.

* * *

# ತುಳು ಭಾಷೆಯ ಪ್ರಾಚೀನ ಸಾಹಿತ್ಯ

ವಿದ್ವಾನ್ ಕೆ. ಎಂ. ಬಾಲಕೃಷ್ಣ ಭಟ್

೧೯೮೪ರ ವರೆಗೆ ತುಳುಭಾಷೆಯಲ್ಲಿ ಶಿಷ್ಟಸಾಹಿತ್ಯ, ಗ್ರಾಂಥಿಕ ಸಾಹಿತ್ಯ ರಚನೆಯಾಗಿತ್ತು ಎಂಬುದರ ಬಗ್ಗೆ ಸ್ಪಷ್ಟ ಮಾಹಿತಿ ದೊರೆಯದೆ ತುಳುವಿನಲ್ಲಿ ಕೇವಲ ಗಾದೆಗಳು, ಪಾಡ್ದನಗಳು ಮಾತ್ರ ರಚನೆಯಾಗಿದ್ದುವು ಎಂಬ ಭಾವನೆಯಿತ್ತು. ಆದರೆ ತುಳುಭಾಷೆಯಲ್ಲಿ ಶ್ರೇಷ್ಠವಾದ ಗ್ರಂಥಗಳು ರಚನೆಯಾಗಿದ್ದುವು ಎಂಬುದರ ಬಗ್ಗೆ ಸಂಶೋಧಕರು ಸಂಶೋಧನೆ ಮಾಡಿ ಅನೇಕ ತುಳುಗ್ರಂಥಗಳನ್ನು ಪತ್ತೆ ಹಚ್ಚಿದ್ದಾರೆ.

ತುಳುಭಾಷೆ ಪಂಚದ್ರಾವಿಡ ಭಾಷೆಗಳಲ್ಲಿ ಒಂದು. ಸುಮಾರು ಎರಡು ಸಾವಿರ ವರ್ಷಗಳಿಂದ ಬೆಳೆದು ಬಂದಿದೆ. ತುಳುವಿಗೆ ಒಂದು ಲಿಪಿಯೂ ಇತ್ತು, ತಿಗಳಾರಿಲಿಪಿ. ಇದು ಮಲೆಯಾಳ ಲಿಪಿಯನ್ನು ಹೋಲುತ್ತದೆ. ಈ ಲಿಪಿಯಲ್ಲಿ ಕೆಲವು ಗ್ರಂಥಗಳನ್ನು ತುಳುವಿನಲ್ಲಿ ರಚಿಸಿದ್ದರು. ವೇದ ಮಂತ್ರಗಳನ್ನು ಬರೆಯಲು ಉಪಯೋಗಿಸುತ್ತಿದ್ದರು. ಆದರೆ ಇತ್ತೀಚೆಗಿನ ವರ್ಷಗಳಲ್ಲಿ ತುಳುಭಾಷೆಗೆ ಕನ್ನಡದ ಲಿಪಿಯನ್ನೇ ಉಪಯೋಗಿಸಲಾಗುತ್ತದೆ.

ಹಳೆಗನ್ನಡ ಇಂದು ಸಾಮಾನ್ಯ ಜನರಿಗೆ ಅರ್ಥವಾಗುವುದಿಲ್ಲ. ಅದೇ ರೀತಿ ಹಳೆಯ ಕಾಲದ ತುಳುಗ್ರಂಥಗಳೂ ಸಾಮಾನ್ಯ ಜನರಿಗೆ ಅರ್ಥ ಆಗುವುದಿಲ್ಲ. ಆದರೆ ತುಳುವಿನಲ್ಲಿ ವಿಪುಲವಾದ ತುಳು ಸಾಹಿತ್ಯ ರಚನೆಯಾಗಿದೆಯೆಂಬುದು ಸತ್ಯ.

ತುಳು ಭಾಷೆಯಲ್ಲಿ ಜನಾಂಗೀಯ ಭೇದಗಳೂ ಪ್ರಾಂತ್ಯಭೇದಗಳೂ ಇವೆ. ಬೇರೆಬೇರೆ ಜನಾಂಗಗಳು ಮಾತನಾಡುವ ಮಾತಿನಲ್ಲಿ ಹಾಗೂ ಬೇರೆ ಬೇರೆ ತಾಲ್ಲೂಕುಗಳಲ್ಲಿ ಮಾತನಾಡುವ ಭಾಷೆಗಳಲ್ಲಿ ಅಲ್ಪಸ್ವಲ್ಪ ಭೇದಗಳಿರುವುದು ಸ್ವಾಭಾವಿಕ.

ಆಧುನಿಕ ತುಳು ಸಾಹಿತ್ಯದಲ್ಲಿ ಕವನಗಳು, ಕಥೆಗಳು, ಕಾವ್ಯಗಳು, ನಾಟಕಗಳು, ಯಕ್ಷಗಾನ ಸಾಹಿತ್ಯ ಇತ್ಯಾದಿಗಳು ಬೆಳೆದು ಬಂದು ಚಲನಚಿತ್ರಗಳೂ ರಚನೆಯಾಗಿವೆ. ಸುಂದರವಾದ ಜನಪದ ಸಾಹಿತ್ಯ ಹಾಗೂ ಸಾಂಸ್ಕೃತಿಕ ಪರಂಪರೆ ತುಳುನಾಡಿಗೆ ಇದೆ. ಸುಸಂಸ್ಕೃತವಾದ ಜೀವನ ಪದ್ಧತಿಯನ್ನು ತುಳುನಾಡಿನ ಜನರು ಅನುಸರಿಸುತ್ತಾರೆ. ತನ್ನದೇ ಆದ ವೈಭವೀಕೃತವಾದ ಪರಂಪರೆಯ ಅಡಿಗಲ್ಲು ತುಳುನಾಡಿನ ವೈಶಿಷ್ಟ್ಯ.

ತುಳುನಾಡಿನ ಪ್ರಾಚೀನ ಸಾಹಿತ್ಯವೂ ಉಜ್ವಲವಾದುದು. ಅಗಾಧವಾದ ಪಾಂಡಿತ್ಯ ಹಾಗೂ ಸಾಹಿತ್ಯಗುಣಗಳನ್ನು ತುಳು ಪ್ರಾಚೀನ ಗ್ರಂಥಗಳಲ್ಲಿ ಕಾಣಬಹುದು. ಶ್ರೀ ವಾದಿರಾಜರ ದಶಾವತಾರ ಸ್ತೋತ್ರವೆಂಬ ತುಳು ಭಾಷೆಯಲ್ಲಿ ರಚಿತವಾದ ಗ್ರಂಥ ಸುಂದರವಾಗಿದೆ.

ಇದರಂತೆ ತುಳು ಭಾಷೆಯಲ್ಲಿ ರಚನೆಯಾದ ಗ್ರಂಥಗಳನ್ನು ಪತ್ತೆಹಚ್ಚುವ ಸಂಶೋಧನಾತ್ಮಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ವಿದ್ವಾನ್ ವೆಂಕಟರಾಜ ಪುಣಿಂಚತ್ತಾಯರ ಸಾಧನೆಯನ್ನು ಎಷ್ಟು ಪ್ರಶಂಸಿಸಿದರೂ ಅಲ್ಪವೇ ಆಗುತ್ತದೆ. ಸಂಸ್ಕೃತ, ಕನ್ನಡ, ತುಳು, ಮಲೆಯಾಳ ಭಾಷೆಗಳಲ್ಲಿ ನಿಷ್ಣಾತರಾದ ಬಹುಭಾಷಾ ಪಂಡಿತರೂ, ಹಿರಿಯ ಕವಿಗಳೂ ಆದ ಅವರು ಪಟ್ಟಪರಿಶ್ರಮ ಅಪೂರ್ವವಾದುದು. ನಮ್ಮ ನಾಡಿನಲ್ಲಿ ಇನ್ನೂ ಇಂಥ ಅಪೂರ್ವ ವಿದ್ವನ್ಮಣಿಗಳು ಕ್ರಿಯಾಶೀಲ ರಾಗಿದ್ದಾರೆಂಬುದು ಹೆಮ್ಮೆಯ ವಿಷಯ. ತಾಡವಾಲೆಗಳಲ್ಲಿ ನಿದ್ರಿಸುತ್ತ ಎಲ್ಲೆಲ್ಲಿಯೋ ಯಾವು ಯಾವುದೋ ಮೂಲೆಯಲ್ಲಿದ್ದ ಗ್ರಂಥಗಳು ಶ್ರೀ ಪುಣಿಂಚತ್ತಾಯರ ಅಪಾರ ಪರಿಶ್ರಮದ ಸಂಶೋಧನೆಯಿಂದ ಬೆಳಕು ಕಂಡಿವೆ, ತನ್ಮೂಲಕ ತುಳುಭಾಷೆಯ ವೈಭವವನ್ನು ಸಾರುತ್ತವೆ.

**ಶ್ರೀ ಭಾಗವತೊ:**

ಇದು ಎರಡು ಸಾವಿರ ಪದ್ಯಗಳಿರುವ ೧೭ನೇ ಶತಮಾನದಲ್ಲಿ ರಚಿತವಾದ ಸುಂದರವಾದ ಕಾವ್ಯ. ವಿಷ್ಣುತುಂಗನೆಂಬ ಕವಿ ಇದನ್ನು ರಚಿಸಿದ್ದಾನೆ. ಮಧೂರು ಶ್ರೀ ಶಿವನಾರಾಯಣ ಶರಳಾಯರ ಮನೆಯಲ್ಲಿದ್ದ ತಾಡವಾಲೆಯ ಈ ಕೃತಿ ತುಳು ಲಿಪಿಯಲ್ಲಿಯೇ ಬರೆಯಲ್ಪಟ್ಟಿದೆ. ಇದರಲ್ಲಿ ತರಳ, ತೋಟಕ, ಮಲ್ಲಿಕಾಮಾಲೆ ಇತ್ಯಾದಿ ವೃತ್ತಗಳೂ, ಅಂಶಗಣ ವೃತ್ತಗಳೂ, ಚಿತ್ರಪದ ರಚನೆಗಳೂ, ಷಟ್ಪದಿಗಳೂ ಇದ್ದು ವೈವಿಧ್ಯಮಯ ಛಂದಸ್ಸುಗಳು ಕೂಡಿ ಆಹ್ಲಾದದಾಯಕವಾಗಿವೆ, ಮಂಗಳೂರು ವಿ. ವಿ. ಯಿಂದ ಪ್ರಕಟಿತವಾಗಿದೆ.

**ಕಾವೇರಿ :**

ಇದರ ಕರ್ತೃವಿನ ಬಗ್ಗೆ ತಿಳಿದಿಲ್ಲ. ಆದರೆ ಅನೇಕ ರೀತಿಯ ಛಂದಸ್ಸುಗಳನ್ನು ಉಪಯೋಗಿಸಿ ತುಳುಲಿಪಿಯಲ್ಲಿ ಬರೆಯಲಾದ ಈ ಸಣ್ಣಕಾವ್ಯ ದೊಡ್ಡಗುಣಗಳಿಂದ ಕೂಡಿದೆ. ಶ್ರೀಪುಣಿಂಚತ್ತಾಯರು ಸಂಶೋಧಿಸಿ ಸಂಗ್ರಹಿಸಿದ ಈ ಕೃತಿ ಉಡುಪಿಯ ರಾಷ್ಟ್ರಕವಿ ಗೋವಿಂದಪೈ ಸಂಶೋಧನಾ ಕೇಂದ್ರದಿಂದ ಪ್ರಕಟಿತವಾಗಿದೆ.

**ತುಳುದೇವಿ ಮಹಾತ್ಮೆ :**

ಈ ಕಾವ್ಯದ ಕರ್ತೃವೂ ಅಜ್ಞಾತನಾಗಿದ್ದಾನೆ. ಇದನ್ನು ಶ್ರೀ ಪುಣಿಂಚತ್ತಾಯರು ಸಂಶೋಧನೆ ಮಾಡಿದ್ದಾರೆ. ಗದ್ಯರೂಪದಲ್ಲಿರುವ ಈ ಸುಂದರ ಕಾವ್ಯವನ್ನು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರದವರು ಪ್ರಕಟಿಸಿದ್ದಾರೆ. ಈ ಕೃತಿಯ ಕರ್ತೃ ತೆಂಕಿಲ್ಲಾಯರ ವಂಶಸ್ಥ ರಾಗಿರಬಹುದು ಎಂದು ಊಹಿಸಲು ಆಧಾರಗಳು ಕಾವ್ಯದಲ್ಲಿ ದೊರೆಯುತ್ತವೆ.

**ತುಳು ಮಹಾಭಾರತ :**

೨೦೦೦ ಪದ್ಯಗಳಿರುವ ಅನೇಕ ರೀತಿಯ ವೃತ್ತಗಳನ್ನು ಅಳವಡಿಸಿ ಸುಂದರವಾಗಿ ರಚಿಸಲ್ಪಟ್ಟ

ಮಹಾಕಾವ್ಯ. ೧೪ನೇ ಶತಮಾನದಲ್ಲಿ ರಚಿತವಾಗಿದೆ. ಶಂಕರನಾರಾಯಣ ನಾಣಿಲ್ತಾಯರ ಶಿಷ್ಯರ ಶಿಷ್ಯ ತಾನು ಎಂದು ಈ ಭಾರತದ ಕರ್ತೃವಾದ ಅರುಣಾಬ್ಜನು ಹೇಳುತ್ತಾನೆ. ಕುಮಾರವ್ಯಾಸ ಕವಿಯನ್ನು ಈ ಕವಿಯು ಅನುಸರಿಸಿದ್ದಾನೆ. ಇದರಿಂದ ಕುಮಾರವ್ಯಾಸನು ಈ ಕವಿಗೆ ಮೊದಲೇ ಭಾರತವನ್ನು ರಚಿಸಿದ್ದಾನೆ. ಆದ್ದರಿಂದ ಕುಮಾರವ್ಯಾಸನ ಕಾಲ ೧೪ನೇ ಶತಮಾನಕ್ಕಿಂತ ಹಿಂದೆ ಎಂಬುದು ಈ ಕಾವ್ಯದಿಂದ ಸ್ಪಷ್ಟವಾಗುತ್ತದೆ. (ದಿ॥ ಗೋವಿಂದ ಪೈಗಳ ದೃಷ್ಟಿಯಲ್ಲಿ ಕುಮಾರ ವ್ಯಾಸನ ಕಾಲ ೧೩ನೇ ಶತಮಾನ) ೧೩೮೩ರಲ್ಲಿ ರಚಿಸಿದ ಶಾಸನವೊಂದನ್ನು ಡಾ॥ ವಸಂತ ಶೆಟ್ಟಿಯವರು ಪತ್ತೆಮಾಡಿದ್ದರಿಂದ ಕೆಲವು ಮುಖ್ಯವಾದ ವಿಷಯಗಳು ತಿಳಿಯುತ್ತವೆ.

ಅರುಣಾಬ್ಜ ಕವಿಯು ಮಾಡಿದ ಪೂರ್ವ ಕವಿಗಳ ಸ್ತುತಿಯಿಂದ ತುಳು ಭಾಷೆಯಲ್ಲಿ ಅನೇಕ ಕೃತಿಗಳದ್ದ ಬಗ್ಗೆ ತಿಳಿಯುತ್ತದೆ. ರಾಮಾಯಣವಿತ್ತು ಎಂದು ತಿಳಿಯುತ್ತದೆ. ಹಾಗೆಯೇ ಬಕಾಸುರ ವಧೆ, ಕೀಚಕವಧೆ, ರುಕ್ಮಿಣಿ ಸ್ವಯಂವರ (ಈ ಮೂರು ಗ್ರಂಥಗಳ ಕರ್ತೃ ''ಗುಡ್ಡೆತರಾಯೆ'') ಇವುಗಳ ಬಗ್ಗೆ ಅರುಣಾಬ್ಜನು ಉಲ್ಲೇಖಿಸಿದ್ದಾನೆ. ಆದರೆ ಕೃತಿಗಳು ಇನ್ನೂ ದೊರಕಿಲ್ಲ. ಅಂಬರಿಷೋಪಾಖ್ಯಾನವೆಂಬ ಕಾವ್ಯದ ಬಗ್ಗೆ ಉಲ್ಲೇಖವಿದೆ, ಆದರೆ ಕಾವ್ಯ ದೊರೆತಿಲ್ಲ.

ಭಾರತದ ಅಧಿಕೃತ ಭಾಷೆಗಳ ಪಟ್ಟಿಯಲ್ಲಿ ತುಳುಭಾಷೆಯೂ ಸೇರುವಂತಾಗಲು ಶ್ರೀ ಪುಣಿಂಚತ್ತಾಯರಂಥ ಹಿರಿಯ ಸಂಶೋಧಕರ ಸಾಧನೆ ಕಾರಣ. ಪಂಚದ್ರಾವಿಡ ಭಾಷೆಗಳಲ್ಲಿ ಒಂದಾದ ತುಳು ಭಾಷೆಯು ಸುಂದರವಾಗಿದೆ ಮಾತ್ರವಲ್ಲ, ವೈಶಿಷ್ಟ್ಯಪೂರ್ಣವಾಗಿದೆ. ಅಪರಿಮಿತ ವಾದ ಸಾಹಿತ್ಯ ಈ ಭಾಷೆಯಲ್ಲಿ ನಿರ್ಮಾಣವಾಗಿದೆ. ಕಳೆದ ಇಪ್ಪತ್ತೈದು ವರ್ಷಗಳಿಂದ ಆಧುನಿಕ ತುಳು ಸಾಹಿತ್ಯ ವಿಪುಲವಾಗಿ ಬೆಳೆಯುತ್ತಿದೆ.

ತುಳುವಿನ ಪ್ರಾಚೀನ ಕಾವ್ಯಗಳಲ್ಲಿ ಅನೇಕ ಕೃತಿಗಳು ಲಭ್ಯವಾಗಿವೆ. ಇನ್ನೆಷ್ಟೋ ಕಾಲಗರ್ಭದಲ್ಲಿ ಹುದುಗಿವೆ. ಈ ದಿಕ್ಕಿನಲ್ಲಿ ಸಂಶೋಧನೆ ಅಗತ್ಯ.

## ತುಳು ಭಾಷೆಯ ಚೆಲುವು

ಕಲ್ಯಾಣಪುರದಿಂದ ಕಾಸರಗೋಡಿನವರೆಗೆ ವ್ಯಾಪಿಸಿದ ತುಳುನಾಡು ಸುಂದರವಾದ ನಾಡು. ಇಲ್ಲಿನ ವ್ಯಾವಹಾರಿಕ ಭಾಷೆ ತುಳು. ಪಂಚದ್ರಾವಿಡ ಭಾಷೆಗಳಲ್ಲಿ ಈ ಭಾಷೆಯೂ ಒಂದು. ತನ್ನದೇ ಆದ ವೈಶಿಷ್ಟ್ಯ ತುಳುನಾಡಿಗೆ ಹಾಗೂ ಭಾಷೆಗೆ ಇದ್ದೇ ಇದೆ. ತೌಳವದ ಜನರು ಸುಸಂಸ್ಕೃತರು. ಸಂಸ್ಕೃತಿಯ ಹಿರಿಮೆ ಇಲ್ಲಿದೆ. ತುಳು ಭಾಷೆಯನ್ನಾಡುವ ಜನರು ಕರ್ನಾಟಕದ ಇತರ ಭಾಗಗಳಲ್ಲಿಯೂ ಬೇರೆ ಪ್ರಾಂತ್ಯಗಳಲ್ಲಿಯೂ ವಿದೇಶಗಳಲ್ಲಿಯೂ ಸಹ ಇಂದು ಉದ್ಯೋಗ ವ್ಯಾಪಾರ ವ್ಯವಹಾರಗಳ ನಿಮಿತ್ತ ನೆಲಸಿದ್ದಾರೆ. ತುಳುನಾಡಿನ ಜನರ ಸಾಹಸಪ್ರಿಯತೆಗೆ ಇದೂ ಒಂದು ನಿದರ್ಶನ. ಎಲ್ಲಿಯೇ ಇರಲಿ ಹೇಗೇ ಇರಲಿ ತನ್ನ ಜನ್ಮಭೂಮಿ ಹಾಗೂ ಭಾಷೆಯ ಬಗ್ಗೆ ಅಭಿಮಾನವಿರಬೇಕಾದುದು ಅತ್ಯಗತ್ಯ. ತುಳುನಾಡಿನ ಸಂಸ್ಕೃತಿ ಹಿರಿದಾದುದು. ಪ್ರಕೃತಿ ಸೌಂದರ್ಯದಿಂದ ಕೂಡಿದ ತುಳುನಾಡಿನ ಧಾರ್ಮಿಕ ಸಾಮಾಜಿಕ ವ್ಯಾವಹಾರಿಕ ಪದ್ಧತಿಗಳು ಆದರ್ಶಮಯವಾದುವು.

"ಬೇಟೆ ಕಂಬಳ ಕೋಲ ತಾಳಮದ್ದಳೆಗಳಲಿ
ನಮ್ಮ ಹಿರಿಯರ ಹುರುಪು ನೋಡಬೇಕು
ಅಶ್ವಧಾಟಿಯ ಹಿಡಿದು ನಮ್ಮಜ್ಜ ಜೈಮಿನಿಯ
ಓದುತಿರೆ ಸರಸತಿಯೆ ನಲಿಯಬೇಕು."

ಎಂದು ಹಿರಿಯ ಕವಿ ಕಯ್ಯಾರ ಕಿಞ್ಞಣ್ಣರೈಗಳು ಬರೆದ ಸಾಲುಗಳನ್ನು ಮನನಮಾಡಿದರೆ ತುಳುನಾಡಿನ ಹಿರಿಮೆಯು ನೆನಪಾಗದಿರಲು ಸಾಧ್ಯವೇ ಇಲ್ಲ.

ತುಳುಭಾಷೆಯಲ್ಲಿ ಹಲವಾರು ಗ್ರಂಥಗಳು ಬಂದಿವೆ. ತುಳು ನಾಟಕ, ಯಕ್ಷಗಾನ, ಚಲನಚಿತ್ರಗಳು ನಡೆಯುತ್ತಿವೆ. ಪಾಡ್ದನಗಳಲ್ಲಿ, ಗಾದೆಗಳಲ್ಲಿ ತುಳುಭಾಷೆಯ ಚೆಲುವು ಹೊಮ್ಮಿದೆಯೆಂದರೆ ಅತಿಶಯೋಕ್ತಿಯಲ್ಲ. ಕೆಲವು ಶಬ್ದಗಳನ್ನು ತುಳುಭಾಷೆಯ ಚೆಲುವನ್ನು ನೆನಪಿಸುವುದಕ್ಕಾಗಿ ಉದಾಹರಿಸುತ್ತೇನೆ :

| ಕನ್ನಡ | | ತುಳು |
|---|---|---|
| ಬೀಡು (ಮನೆ) | = | ಬೂಡು |
| ಮನೆಯಲ್ಲಿರುವವಳು | = | ಬೂಡೆತ್ತಿ (ಗೃಹಿಣಿ) |
| ಗಂಡಸು | = | ಕಂಡಾಣಿ |
| ದೈವ | = | ದೆಯ್ಯೊ |
| ದೇವರು | = | ದೇಬೆರು |
| ಕೂಸು (ಮಗು) | = | ಜೇವು |
| ಹೆಣ್ಣುಮಗು | = | ಪೊಣ್ಜೇವು (ಪೊಣ್ಜೆ) |
| ಗಂಡುಮಗು | = | ಆಣುಂಜೆ |
| ಬೇಟೆ | = | ಬೋಂಟೆ |
| ಉಚ್ಚಾಯನ (ಶ್ರೇಷ್ಠವಾದ ಉತ್ಸವ) | = | ಉಚ್ಚಾಯೊ |
| ಪ್ರಧಾನಿ | = | ಪೆರ್ಗಣಿ |
| ಧೂಮಾವತಿ | = | ಜುಮಾದಿ |
| ಹೋಯಿತು ಹೋಗಲಿ | = | ಪೋಂಡು ಪೋ |
| ಉದಿಸುವುದು | = | ಉದಿಪ್ಪು |
| ಪುಲಿ (ಹುಲಿ) | = | ಪಿಲಿ |
| ಮಾವ | = | ಮಾಮೆ |
| ಉಣಿಸು (ಅನ್ನ) | = | ಉಣುಪ್ಪು |
| ವೀರತನ (ಶೌರ್ಯ, ಅಹಂಕಾರ) | = | ಬೀರ್ದ್ಯೊ |
| ಬರಹ | = | ಬರಾವು |

| | | |
|---|---|---|
| ಹಸಿವು | = | ಬಡಾವು |
| ಪೋಪೆನು (ಹೋಗುವೆನು) | = | ಪೋಪೆ |
| ಮಂಡೆ ಬಿಸಿ | = | ಮಂಡೆಬೆಚ್ಚ |
| ಕಾಗೆ | = | ಕಕ್ಕೆ |
| ವೀಳೆಯ | = | ಬೂಳ್ಯೊ |
| ಬೆಳಕು | = | ಬೊಳ್ಪು |
| ಬಡಿಗೆ (ಬೆತ್ತ) | = | ಬಡು |

ಹೀಗೆ ಶಬ್ದಗಳ ವ್ಯುತ್ಪತ್ತಿ, ಅರ್ಥ ವೈಶಾಲ್ಯಗಳನ್ನು ಗಮನಿಸಿದರೆ ಆನಂದವುಂಟಾಗುತ್ತದೆ. ತುಳು ಮಧುರವಾದ ಮೃದು ಭಾಷೆ. ಮಹಾಪ್ರಾಣಾಕ್ಷರಗಳ ಪ್ರಯೋಗ ತೀರಾ ಕಡಮೆ. ಲಾಲಿತ್ಯಪೂರ್ಣವಾದುದರಿಂದ ತುಳುಭಾಷೆಯನ್ನು ಕೇಳಲು ಬಹಳ ಆನಂದವಾಗುತ್ತದೆ.

**ಗಾದೆಗಳ ಸೊಗಸನ್ನು ಗಮನಿಸಿ :**

೧. ಬಾರು ಬಲ್ಲಾಳಕು, ದೂರು ಕುಂಡೇಚಕು
*(ಭತ್ತ ಬಲ್ಲಾಳನಿಗೆ ದೂರು ಆಳಿಲಿಗೆ)*

೨. ಪೆಲತ್ತರಿನು ಮಡಿಲುಟು ಕಟ್ಯೋಳಿ, ಮರೊನು ಕಟ್ಟುನೆ ಎಂಚ
(ಹಲಸಿನ ಬೀಜವನ್ನು ಉಡಿಯಲ್ಲಿ ಕಟ್ಟಬಹುದು, ಮರವನ್ನು ಕಟ್ಟುವುದು ಹೇಗೆ?)

೩. ಕೋರಿನು ಕೇಣುತುಕಾರ ಅತಿಪ್ಪುನ ಕ್ರಮ ಉಂಡೊ
*(ಕೋಳಿಯನ್ನು ಕೇಳಿ ಕಾರವನ್ನು ಅರೆಯುವ ಕ್ರಮ ಇದೆಯೆ?)*

೪. ಅಪ್ಪೆಡ್ದು ಮಿತ್ತು ದೇಪೇರು ಉಂಡೋ?
*(ತಾಯಿಗಿಂತ ಮಿಗಿಲಾದ ದೇವರಿದೆಯೆ?)*

ಹೀಗೆ ಸುಂದರವಾದ ಗಾದೆಗಳು, ಪಾಡ್ದನಗಳು ತುಳುವಿನಲ್ಲಿವೆ. ಹೇರಳವಾಗಿರುವ ಈ ಸುಂದರವಾದ ಸಾಹಿತ್ಯದ ಸಂಗ್ರಹವಾಗಬೇಕು. ತುಳುಭಾಷೆಯ ಸೊಗಸು ಸೌರಭಗಳನ್ನು ಅರಿತು ಆನಂದಿಸುವ ಪ್ರವೃತ್ತಿ ಬೆಳೆಯಬೇಕು.

* * *

# ವೆಂಕಟರಾಜ ಪುಣಿಂಚತ್ತಾಯ

ಅರವತ್ಮೂರು ವರುಷದ ಪುಂಡೂರು ವೆಂಕಟರಾಜ ಪುಣಿಂಚತ್ತಾಯ ತುಳು ಸಾಹಿತ್ಯ ಲೋಕದಲ್ಲಿ ಅತ್ಯಂತ ಜನಪ್ರಿಯ ಲೇಖಕರು; ಮೂಲತಃ ಕವಿ ಹೃದಯದ ಪುಣಿಂಚತ್ತಾಯರು ಸಂಸ್ಕೃತ ಸಾಹಿತ್ಯ ಶಿರೋಮಣಿ; ಹಿಂದೀ ರಾಷ್ಟ್ರ ಭಾಷಾ ವಿಶಾರದರು; ಕನ್ನಡದ ವಿದ್ವಾನ್ ಕೂಡ.

ಅವರ ಕಾವ್ಯಕೃತಿಗಳು ಎಂಟು. ಶೈಲೂಷಿ, ಜೋಕಾಲಿ, ಅಕ್ಷರ ಯಾತ್ರೆ ಜನಪ್ರಿಯ ಕೃತಿಗಳು; ''ಆಲಡೆ'' ಎಂಬ ತುಳು ಕವಿತೆಗಳ ಸಂಗ್ರಹ ತುಳುಜನರಲ್ಲಿ ಚಿರಪರಿಚಿತ.

ಸಂಸ್ಕೃತ ಹಾಗೂ ಮಲೆಯಾಳಿ ಭಾಷೆಗಳಿಂದ ಅನೇಕ ಗ್ರಂಥಗಳನ್ನು ಅನುವಾದಿಸಿದ್ದಾರೆ. ಮೂರು ನಾಟಕಗಳನ್ನು ಬರೆದಿದ್ದಾರೆ; ''ಶಂಕರ ವಿಜಯ'' ಎಂಬುದು ಅವರು ರಚಿಸಿದ ಯಕ್ಷಗಾನ.

ಅವರ ಗದ್ಯಕೃಷಿ ಅಪಾರ. ಮೊಗವೀರರ ಸಂಸ್ಕೃತಿ; ಕೇರಳದ ವರ್ಣಚಿತ್ರಲೋಕ; ತುಳು ನಡೆ-ನುಡಿ; ಬಾಯಾರು ಸಂಕಯ್ಯ ಭಾಗೋತೇರ್, ಪುಳ್ಕೂರ್ ಬಾಚಿ ಅವುಗಳಲ್ಲಿ ಕೆಲವು.

ಅವರಿಗೆ ಬಂದ ಪ್ರಶಸ್ತಿಗಳು ಲೆಕ್ಕವಿಲ್ಲ; ಸನ್ಮಾನಗಳೂ ಅಗಣಿತ; ಅಹರ್ನಿಶೆ ಸಾರ್ವಜನಿಕ ಸೇವೆಗೆ ತೊಡಗಿಸಿಕೊಂಡ ಲೇಖಕರು.

ತುಳುವಿನಲ್ಲಿ ಶಿಷ್ಟ ಪರಂಪರೆಯೇ ಇದ್ದಿರಲಿಲ್ಲ ಎಂಬ ವಾದವನ್ನು ಅಲ್ಲಗಳೆದವರು; ನಾಲ್ಕು ಪ್ರಾಚೀನ ತುಳು ತಾಡವಾಲೆ ಗ್ರಂಥಗಳನ್ನು ಪತ್ತೆ ಹಚ್ಚಿದವರು; ಅರ್ಥಕೋಶ ಸಂಪಾದಿಸಿ ಭಾರತದ ೨೦ ಭಾಷೆಗಳ ಸಾಲಿನಲ್ಲಿ ತುಳುವಿಗೂ ಸಮಾನ ಸ್ಥಾನ ಕಲ್ಪಿಸಿಕೊಟ್ಟ ಮಹನೀಯರು.

* * *

# ಭಗವಂತ

ತುಳು ಮೂಲ ಮತ್ತು ಅನುವಾದ
**ವೆಂಕಟರಾಜ ಪುಣಿಂಚತ್ತಾಯ**

ನೀನು ಎಲ್ಲಿ ಅಡಗಿ ಕುಳಿತೆ ಭಗವಂತ
ನಿನ್ನನ್ನು ಅರಸುವೆವು ನಾವು - ನಮ್ಮ
ವಿನಂತಿಯನ್ನು ಮರೆಯದೆ ಕೇಳು - ನಿನಗಾಗಿ
ಎರಡು ಕೈ ಜೋಡಿಸುತ್ತಿದ್ದೇವೆ

ಕಗ್ಗತ್ತಲೆಯ ಕಾಡಿನ ಬಳಿ
ಹಸುರು ಬಣ್ಣದ ಬಯಲಿನ ನಡುವೆ
ನಿನ್ನ ರೂಪ ಇದೆಯೋ ಎಂದು ನೋಡಿದೆವು
ನಿನಗೋಸ್ಕರ ಕಣ್ಣು ತೆರೆದವು

ಶುಕ್ರ ನಕ್ಷತ್ರದ ಬೆಳಕು
ಚಂದ್ರನ ನಡುವಣ ಕಪ್ಪು
ಆಗಸದ ಮಿಂಚಿನ ಹೊಳಪು
ಏನೊಂದು ಮಹಿಮೆಯ ವಿಷಯ !

ದೇವಸ್ಥಾನದ ಗರ್ಭಗುಡಿಯಲ್ಲಿ
ದೀಪಮಾಲೆಯ ಕಾಂತಿ ನಡುವಿನಲ್ಲಿ
ಶಿಲ್ಪಿಯ ಶಿಲೆಕಲ್ಲಿನ ಎಡೆಯಲ್ಲಿ
ನಿನಗಾಗಿ ಕಣ್ಣು ತೆರೆದೆವು

ಎರಡು ಕಂಗಳನ್ನು ಮುಚ್ಚಿ ನಾವು
ಆತ್ಮದ ಒಳಗೆ ಇಣುಕಿದೆವು
ನಿನ್ನ ರೂಪದ ಚೆಲುವ ನೋಡಿದೆವು
ನಿನಗಾಗಿ ತಲೆ ಬಗ್ಗಿಸಿದೆವು

* * *

# ಕೊಡವ ಸಾಹಿತ್ಯ ಪರಂಪರೆ

ಮಂಡೀರ ಜಯಾ ಅಪ್ಪಣ್ಣ

ಕೊಡವಾದಿ ಕವಿರಾಜ। ಹುಟ್ಟಿ ಬಾ।
ಕವಿ ಅಪ್ಪಚ್ಚ। ಇನ್ನೊಮ್ಮೆ ಹುಟ್ಟಿ ಬಾ।
ಹೊನ್ನ ಮಾಲೆಯ। ಕೊಡಗ ಸುತ್ತಿ ಬಾ।
ಹೊತ್ತು ಸಾಹಿತ್ಯ ಕೃತಿ। ಇತ್ತ ಬಾ!
ದಟ್ಟಿ ಕುಪ್ಪಸ ತೊಟ್ಟು। ಜರತಾರಿ ಪೇಟ।
ಕಟ್ಟಿ ಕೃತಿಗಳ ಹಿಡಿದು। ದಿಟ್ಟನೆಯ ನೋಟ।
ಕನ್ನಡದ ರಾಗರಸ। ಪಾಯಸದ ಊಟ।
ಕೊಡವ ಭಾಷೆಗೆ । ನಿನ್ನ ಸಾಹಿತ್ಯ ಪಾಟ।

ಕೊಡವಾದಿ ಕವಿ; ''ಹರಿದಾಸ'' ಕಾವ್ಯಾನಾಮಾಂಕಿತರಾಗಿದ್ದ ಅಪ್ಪನೆರವಂಡ ಅಪ್ಪಚ್ಚ ಕವಿಗಳು ಹದಿನೆಂಟನೇ ಶತಮಾನದ ಕೊಡವ ಸಾಹಿತ್ಯ ಕ್ಷೇತ್ರದಲ್ಲಿ ಮಿಂಚಿ ಮರೆಯಾದವರು. ಕೊಡವ ಹಾಡು, ಕವನ, ಚುಟುಕ, ಮತ್ತು ಪೌರಾಣಿಕ ಕೊಡವ ನಾಲ್ಕು ನಾಟಕ ಬರಹಗಾರರಾಗಿ, ಹಾಡುಗಾರರಾಗಿ, ನಟರಾಗಿ ಕೊಡವ ಸಾಹಿತ್ಯ ಡಿಂಡಿಮ ಬಾರಿಸಿದರು. ಅವರ ''ಕಾವೇರಿ'', ''ಯಯಾತಿ'', ''ಸಾವಿತ್ರಿ'', ''ಸುಬ್ರಮಣ್ಯ'' ನಾಟಕಗಳು ಇಂದಿಗೂ ಜನಪ್ರಿಯವಾಗಿವೆ. ಅಪ್ಪಚ್ಚಕವಿಗಳು ಕೊಡಗಿನ ಕಿರುಂದಾಡು ಗ್ರಾಮದ ಅಪ್ಪನೆರವಂಡ ಕುಟುಂಬದಲ್ಲಿ ಮೇದಯ್ಯ-ಬೊಳ್ಳವ್ವ ದಂಪತಿಗಳ ಮಗ. ಬಡಕುಟುಂಬದವರಾದ ಇವರಿಗೆ ಸಾವಿತ್ರಮ್ಮ ಎಂಬ ಬ್ರಾಹ್ಮಣ ಹೆಂಗಸು ತಮ್ಮ ಮಗನ ಜೊತೆ ವಿದ್ಯಾಭ್ಯಾಸ ಮಾಡಿಸಿದರು. ಬೆಳೆಯ ಗುಣ ಮೊಳೆಯಲ್ಲಿ ಕಾಣುವಂತೆ ಪ್ರೈಮರಿವರೆಗೂ ಓದಿ ಮುಜರಾಯಿ ಇಲಾಖೆಯಲ್ಲಿ ಕೆಲಸಕ್ಕೆ ಸೇರಿದರು. ಅಂದಿನ ನಾಟಕ ಕಲಾವಿದ ಹಾಗೂ ಕವಿಯಾಗಿ ಹೆಸರುವಾಸಿಯಾದ ಶಾಮರಾಯರು ಮತ್ತು ಶ್ರೀ ವೆಂಕಟಾದ್ರಿಯವರು ಇವರ ಸಾಹಿತ್ಯ ಪ್ರತಿಭೆಯನ್ನರಿತು ಪ್ರೋತ್ಸಾಹ ಕೊಟ್ಟರು. ತನ್ನಲ್ಲಿ ಉಕ್ಕಿ ಬಂದ ಕವಿತೆ-ನಾಟಕ ರಚನೆಗೆ ಶಬ್ದ ಭಂಡಾರವನ್ನು ತುಂಬಿದರು. ಕವನದಿಂದ ಭಾವಗೀತೆ, ಸ್ತೋತ್ರ, ನಾಟಕಕ್ಕೆ ತಲುಪಿದರು. ಕವಿಯ ಮನಸ್ಸು ಯಾವಾಗಲೂ ಸಾಹಿತ್ಯದ ಕಡೆಗೇ ವಾಲಿತು. ೧೯೨೬ರಲ್ಲಿ ಕವಿಯ ಮನೆಗೆ ಬೆಂಕಿ ಬಿದ್ದು ಎಷ್ಟೋ ಕಾವ್ಯ ರಚನೆ, ಕಲಾರಚನೆಯನ್ನು ಅರ್ಧದಲ್ಲೇ ಅಗ್ನಿದೇವನು ನುಂಗಿದನು. ಅಂತೂ ಧೃತಿಗೆಡದೆ ಮುಂದುವರಿದರು.

## ಕಾವೇರಿ

ಕ್ಷೀರಸಮುದ್ರ ಮಥನ ಕಾಲದಲ್ಲಿ ಶ್ರೀ ಮಹಾವಿಷ್ಣು ಮೇದಿನಿ ಆದಿಶಕ್ತಿಯ ಅವತಾರಿಣಿಯಾಗಿ ಬ್ರಹ್ಮಮಾನಸ ಪುತ್ರಿ ಲೋಪಾಮುದ್ರ ಜನ್ಮವೆತ್ತಳು. ಇವಳು ಕವೇರ ಮುನಿಯ ಸಾಕುಮಗಳಾಗಿ ಕೊಡಗಿನ ತಲಕಾವೇರಿಯ ಬ್ರಹ್ಮಗಿರಿ ಎಂಬ ಯಜ್ಞವೇದಿಕೆಯಲ್ಲಿ ಅಗಸ್ತ್ಯನೆಂಬ ತರುಣ ತಾಪಸನ ಪತ್ನಿಯಾಗಿ ಚೈತನ್ಯ ರೂಪದಲ್ಲಿ ಬ್ರಹ್ಮ ಕುಂಡಿಕೆಯಿಂದ ಹೊರಬಿದ್ದು ಕಾವೇರಿ ಹೊಳೆಯಾಗಿ ಲೋಕಕಲ್ಯಾಣ ಮಾಡಿದಳು. ಅಪ್ಪಚ್ಚಕವಿ ಕನ್ನಡ ಕಂದಪದ್ಯದ ಛಂದಸ್ಸು ಮಾತ್ರೆಗೆ ಸರಿಯಾಗಿ ಕೊಡವ ಭಾಷೆಯಲ್ಲಿ, ಕರ್ನಾಟಕ ಸಂಗೀತ ಶೈಲಿಯಲ್ಲಿ ಕಲ್ಯಾಣಿ, ಕೇತಾರ, ದರ್ಭಾರಿ, ಖರಹರ ಪ್ರಿಯ, ಹಿಂದೂಸ್ತಾನಿ, ಮುಖಾರಿ ರಾಗದಲ್ಲಿ ಹಾಡುಗಳನ್ನು ಸೃಷ್ಟಿಸಿದರು. ಕೇದಾರದಲ್ಲಿ ಇವರ ''ಅಂಬಿಕೇ; ಸುಗಮಾಪ್ ಈ ಜಗತ್....'' ಎಂಬ ಹಾಡು ಇಂದಿಗೂ ಕೊಡಗಿನಲ್ಲಿ ಜನಜನಿತವಾಗಿದೆ.

## ಸುಬ್ರಮಣ್ಯ

ಕುಮಾರಸ್ವಾಮಿ ಕೈಲಾಸಪರ್ವತದಲ್ಲಿ ತಪಸ್ಸು ಮಾಡುತ್ತಿರಲು ನಾರದ ಮುನಿಯು ಬಂದು ಭೂಲೋಕ ಕಲ್ಯಾಣಕ್ಕೆ ಪ್ರೇರೇಪಿಸಿದರು. ಶಿವಯೋಗಿಯ ಮಗಳಾದ ಸುರಸೇನೆಯ ತಪಸ್ಸಿಗೆ ಮೆಚ್ಚಿ ಅವಳನ್ನು ಮದುವೆಯಾದ ಪ್ರಸಂಗದಲ್ಲಿ ಕುಮಾರಸ್ವಾಮಿಯ ಮುದಿವೇಷ, ಗಣಪತಿಯ ಆನೆರೂಪ, ಕೋತಿ, ಕರಡಿ, ನರಿ ಇಂತ ವೇಷದ ಪಾತ್ರವನ್ನು ರಚಿಸಿ ಸಂಗೀತಕೃತಿ, ತಮಾಷೆ ಸಂಭಾಷಣೆ, ಸೂತ್ರಧಾರ, ನಟಿ ಎಲ್ಲವನ್ನು ಜನಮೆಚ್ಚುವಂತೆ ರಚಿಸಿದ್ದಾರೆ.

## ಯಯಾತಿರಾಜ

ಇದೂ ಕೂಡ ಪೌರಾಣಿಕವಾಗಿದ್ದು ತುಂಬಾ ಸ್ವಾರಸ್ಯದ ಘಟನೆಯಲ್ಲಡಗಿದೆ. ರಾಕ್ಷಸಗುರು ಶುಕ್ರಾಚಾರ್ಯರ ಮಗಳು ದೇವಯಾನಿ, ರಾಕ್ಷಸರಾಜ ವೃಷಪರ್ವನ ಮಗಳು ಶರ್ಮಿಷ್ಠೆ, ಬಾಲ್ಯ ಸ್ನೇಹಿತೆಯರು. ಸಂದರ್ಭಕ್ಕೆ ವಂಚಿತರಾಗಿ ಇಬ್ಬರೂ ಯಯಾತಿರಾಜನನ್ನು ಮದುವೆಯಾಗ ಬೇಕಾಯಿತು. ರಾಜನ ಮಗಳು ಶರ್ಮಿಷ್ಠೆ ಮುನಿಗಳ ದಾಸಿಯಾಗಬೇಕಾಯಿತು. ವಿಷಯ ತಿಳಿದ ಶುಕ್ರಾಚಾರ್ಯರು ಯಾಯಾತಿಗೆ ವೃದ್ಧನಾಗಲು ಕೊಟ್ಟ ಶಾಪ, ನಂತರ ಶಾಪವಿಮೋಚನೆಗಾಗಿ ಚಿಕ್ಕಮಗನಾದ ಪುರು ತಂದೆಯ ವೃದ್ಧಾಪ್ಯವನ್ನು ತೆಗೆದುಕೊಳ್ಳುವ ಕನಿಕರದ ದೃಶ್ಯ. ಇದು ತುಂಬಾ ಕುತೂಹಲಕಾರಿಯಾಗಿ ಶೇಕ್ಸ್‌ಪಿಯರನ ದುರಂತ ನಾಟಕದಂತಿದೆ.

## ಸಾವಿತ್ರಿ

ಮದ್ರದೇಶದ ದೊರೆ ಅಶ್ವಪತಿಯ ಮಗಳಾದ ಸಾವಿತ್ರಿಯು ಅಲ್ಪಾಯುವಾದ ಸತ್ಯವಾನನನ್ನು ವರಿಸಿ ಭಯಂಕರ ಆಕಾರದಲ್ಲಿ ತನ್ನ ಪತಿಯಪ್ರಾಣವನ್ನು ಸೆಳೆಯಬಂದ ಯಮಧರ್ಮನನ್ನು ಮಾತಿನ ಚಾತುರ್ಯದಿಂದ ಗೆದ್ದು ಯಮನಿಗೆ ಸೋಲುತಂದ ನಾಟಕವನ್ನು ಮೂಲಕ್ಕೆ ಸ್ವಲ್ಪವೂ ಪೆಟ್ಟಾಗದಂತೆ ನೆಯ್ದ ನಾಟಕ ಇಂದಿಗೂ ಹೆಸರುವಾಸಿಯಾಗಿದೆ. ಈ ಕವಿ ೧೯೪೪ರಲ್ಲಿ ಸಾವಿನ ದವಡೆಯಲ್ಲಿರುವಾಗಲೇ ತಮ್ಮ ನಾಲ್ಕು ನಾಟಕಗಳೂ ಜನಪ್ರಿಯತೆಯನ್ನು ಪಡೆದ ವಿಷಯ ತಿಳಿದು ತಾವು ಇಂಗ್ಲೀಷ್ ಕವಿ ''ಜಾನ್‌ಮಿಲ್ಟನ್'' ತರ ತನ್ನ ಹುಟ್ಟೂರಿನಲ್ಲಿ ಅಸುನೀಗಿದರು. ಇಂದಿಗೂ ಶಾಶ್ವತ ಶಾಂತಿ ನೆಮ್ಮದಿಯಲ್ಲಿ ತನ್ನ ಸಮಾಧಿಯಲ್ಲಿ ನಿದ್ರಿಸುತ್ತಿದ್ದಾರೆ.

ಈ ಕವಿಯ ವಿಷಯವಾಗಿ ಕೂಲಂಕಷವಾಗಿ ಡಾ॥ ವಿದ್ವಾನ್ ಐಚೆಟ್ಟಿರ ಮುತ್ತಣ್ಣನವರು ಬೇಕಾದಷ್ಟು ಬರೆದು, ಇವರ ಮೂರು ನಾಟಕಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿ ಪುಸ್ತಕವನ್ನು ೧೯೬೩ರಲ್ಲಿ ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು ಇಲ್ಲಿ ಬಿಡುಗಡೆ ಮಾಡಿದರು. ಕೊಡಗು ಸೃಷ್ಟಿರಂಗದ ಸ್ಥಾಪನೆಗೆ ಕರ್ತೃವಾದ ತರುಣ ಸಾಹಿತಿ, ನಟ ಹಾಗೂ ಎರಡು ಕೊಡವ ಸಿನೆಮಾ (ನಿರೀಕ್ಷೆ, ಬಾಳ್‌ಪೊಲಂದತ್) ನಿರ್ದೇಶಕರಾದ ಶ್ರೀ ಅಡ್ಡಂಡ ಕಾರ್ಯಪ್ಪನವರು ಈ ಹರಿದಾಸ ಆದಿಕವಿ ಅಪ್ಪಚ್ಚನವರ ೧೨೫ನೇ ಜನ್ಮೋತ್ಸವಕ್ಕೆ, "ಅಮರ ಕವಿ ಅಪ್ಪಚ್ಚ" ಎಂಬ ನಾಟಕ ಪುಸ್ತಕವನ್ನು ಹೊರಡಿಸಿ ನಾಟಕ ಪ್ರದರ್ಶನ ಮಾಡಿದರು. ಈ ರೀತಿ ೭ ವಯಸ್ಸಿಗೇ ಜೈಮಿನಿ ಭಾರತವನ್ನು ಓದಿ ನೀರು ಕುಡಿದಿದ್ದ ಹರಿದಾಸರು ಕರ್ನಾಟಕದಲ್ಲಿ ಇನ್ನೊಮ್ಮೆ ಹುಟ್ಟಿಬರಲಿ.

ಇವರ ಕಾಲ್ಥದ ನಂತರ ಕೊಡವ ಭಾಷೆಯ ಸಾಹಿತಿಗಳು ಕವಿ ಶ್ರೀ ನಡಿಕೇರಿಯಂಡ ಚಿಣ್ಣಪ್ಪನವರು. ಇವರು ಕೊಡವ ಜಾನಪದವನ್ನು ಸಂಗ್ರಹಿಸಿ, "ಪಟ್ಟೋಲೆ ಪಳಮೆ" ಎಂಬ ಕೊಡವ ವೇದವನ್ನೂ "ಭಗವಂತಂಡ ಪಾಟ್" ಎಂಬ ಭಗವದ್ಗೀತೆಯ ತರ್ಜುಮೆಯನ್ನೂ ಕೊಡವ ಭಾಷೆಯಲ್ಲಿ ರಚಿಸಿದರು. ೧೮೭೫ರಲ್ಲಿ ಹುಟ್ಟಿದ ಇವರು, ಕೊಡಗಿನ ಮೂಲನಿವಾಸಿಗಳಾದ ಕೊಡವರ ಸಂಸ್ಕೃತಿಯ ಪರಂಪರೆಯನ್ನು, ಕ್ರೂರಪ್ರಾಣಿಗಳ ಜತೆ ಬೇಟೆಯಾಡಿ ಶತ್ರುಗಳನ್ನು ನಿಗ್ರಹಿಸುತ್ತಿದ್ದ ಕೊಡವರ ಸಾಹಸವನ್ನು ಅವರ ಆಟ-ಪಾಟ, ಉಡಿಗೆ ತೊಡಿಗೆ- ಕೋಲಾಟ, ಬೊಳಕಾಟ, ಉಮ್ಮತಾಟ, ಕೊಂಬಾಟ, ಪರಿಯಕಳಿಯನ್ನು ಪ್ರತಿಬಿಂಬಿಸಿ ಬರೆದರು. ಇವರ ಸಾಹಿತ್ಯದಲ್ಲಿ ವ್ಯಂಗ್ಯ ಹಾಗೂ ನೀತಿ, ತಮಾಷೆಗಳು ಲಾಸ್ಯವಾಡುತ್ತವೆ.

ಶ್ರೀ ಬಾಡಮಾಡ ಡಿ. ಗಣಪತಿಯವರು ತ್ರಿಭಾಷಾ ಸಾಹಿತಿಗಳು. ಕೊಡವ ಭಾಷೆಯಲ್ಲಿ ಇವರು ನಾಲ್ಕು ಕೃತಿ ಬರೆದರು. "ನಂಗ ಕೊಡವ", "ಕುತ್ತ್ಂಬೊಳ್‌ಚ" ಪ್ರಸಿದ್ಧಿಯಾಗಿವೆ. ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಕೊಡವ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದವರು. ವಿದ್ವಾನ್ ಡಾ॥ ಐಚೆಟ್ಟಿರ ಮುತ್ತಣ್ಣ ಇವರು ತ್ರಿಭಾಷಾ ಕವಿ ಹಾಗೂ ಸಾಹಿತಿ. ಕೆನಡಾದಲ್ಲಿ ಕೆಲವು ವರ್ಷಗಳು ವಾಸಿಸಿದ್ದರೂ ೧೯೪೩ರಲ್ಲಿ "ಕೊಡವ ಸಂಸ್ಕೃತಿ", ೧೯೪೬ರಲ್ಲಿ "ಪೂಮಾಲೆ", ೧೯೬೪ರಲ್ಲಿ "ರಾಗಮಾಲೆ " ೧೯೭೪ರಲ್ಲಿ "ಮಣಿಮಾಲೆ" ಎಂಬ ಪುಸ್ತಕಗಳನ್ನು ಪ್ರಕಟಿಸಿದ್ದರು. ಇವರು ಅಪ್ಪಚ್ಚ ಕವಿಯ ನಾಲ್ಕು ನಾಟಕಗಳನ್ನು ಕನ್ನಡಕ್ಕೂ, ಕೊಡವ-ಕನ್ನಡ ಭಾಷಾ ನಿಘಂಟು, ಅರ್ಥಕೋಶ, ೧೯೮೬ರಲ್ಲಿ ಅಭಿಜ್ಞಾನ ಶಾಕುಂತಲ, "ಕೊಡಗ್‌ರ ಕೋಮಾಟಿ" ಎಂಬ ನಾಟಕವನ್ನೂ ಕೊಡವ ಭಾಷೆಯಲ್ಲಿ ಬರೆದರು. ಕೊಡವ ಸೃಷ್ಟಿರಂಗ ಪೊನ್ನಂಪೇಟೆ, ಕರ್ತೃಗಳಾದ ಅಡ್ಡಂಡ ಕಾರ್ಯಪ್ಪನವರು ಅಮರ ಕವಿ ಅಪ್ಪಚ್ಚ, ಬಿದ್ದು ಟೈಲರ್‌ರ ಪೊಣ್ಣ್, ಸ್ವಾತಂತ್ರಯೋಧ ಮಲ್ಲೇಂಗಡ ಚಂಗಪ್ಪ ನಾಟಕಗಳ ಲೇಖಕರು. ನಿರೀಕ್ಷೆ ಹಾಗೂ ಬಾಳ್‌ಪೊಲಂದತ್ ಸಿನೆಮಾಗಳ ನಿರ್ದೇಶಕರು. ಅಪ್ಪಾರಂಡ ಗಣಪತಿಯವರ "ಕೊಡಗ್‌ರ ಆರ-ಬೇರ", ಶ್ರೀ ಎಸ್. ಶಂಕರನಾರಾಯಣರವರ "ಕೊಡವ ವ್ಯಾಕರಣ" ಪೇರಿಯೆಂದ ಚಂಗಪ್ಪನವರ "ಆಂದೋಳತ್ ಪಾಟ್", ಮುಕ್ಕಾಟಿರ ಎಸ್. ಪೂವಯ್ಯನವರ "ವಿಧಿ ಮಹಿಮೆ", ಸ್ವಾಮಿ ಶಾಂಭವಾನಂದರವರ "ಸೊಳ್ಳೆಪಾಟ್" (೧೯೩೦), ಪುಗ್ಗೇರ ಕರುಂಬಯ್ಯನವರ "ಆಂದೋಳತ್ ಪಾಟ್" ಮಡೆಯೆಂಡ ರವಿ ಸುಬ್ಬಯ್ಯ ಇವರ "ತೆಳ್‌ನೀರ್" ಕಥಾಸಂಕಲನ, ಶ್ರೀ ಉಳ್ಳಿಯಡ ಪೂವಯ್ಯನವರ "ಚೆಕ್ಕೇರ ಮುತ್ತಣ್ಣ" ಎನ್ನುವ

ಪುಸ್ತಕ. ಪುಗ್ಗೇರ ಬಿದ್ದಪ್ಪನವರ ''ನೆಲ್ಲಕ್ಕಿನಡು ಬಾಡ'' ''ಹರದಾಸ ಅಪ್ಪಚ್ಚ,'' ''ನಡಿಕೇರಿಯೆಂಡ ಚಿಣ್ಣಪ್ಪ'' ಎಂಬ ಪುಸ್ತಕಗಳು ವಿ. ಎಸ್. ರಾಮಕೃಷ್ಣ ಇವರ – ಭಾಮಿನೀ ಷಟ್ಪದಿ ರೂಪದ ಕೊಡವ ಭಾಷೆಯಲ್ಲಿ, ಶ್ರೀ ಕಾವೇರಿ ಮಹಾತ್ಮೆ, ಸದ್ಗುರು ಅಪ್ಪಯ್ಯ ಸ್ವಾಮಿ ಮಹಾತ್ಮೆ, ''ಶನಿದೇವರ ಮಹಾತ್ಮೆ'' ಅಲ್ಲದೆ, ಕೊಡಗ್‌ರ ಬೀರಂಗಲ್ಲ್, ಕೊಡಗ್‌ರ ವನ್ಯಭೂಮಿ, ''ದೇವಕಾಡ್'', ತರ್ಜುಮೆ ಸಾಹಿತ್ಯ ''ಕೆಂಬಟ್ಟಿ ಜನಡ ಸಂಸ್ಕೃತಿ'' ತೋನಾಚಂಡರವರ ''ಕೊಡವ ಪಾಟ್'', ಐನಂಡ ಧನಂಜಯರವರ ''ಬಾಲು ಪಟೇಲ'' ಶ್ರೀಕುಪ್ಪಚ್ಚಿರ ಪೊಣ್ಣಪ್ಪರವರ'' ಪೊಮ್ಮಾಲೆ ಕೊಡಗ್'' ಶ್ರೀಮತಿ ಉಳ್ಳಿಯಡ ದಾಟಿಪೂವಯ್ಯನವರ ಮೂರು ಸಾಮಾಜಿಕ ಕಾದಂಬರಿ – ''ಒಯಿಪತ್ ಮಲ್ಲಿಗೆ'' ''ಜೆಳ್'' ''ತೇನೆತ್ತಕಾರ'', ಜೇಂದ್ರಿಮಾಡ ಮುತ್ತಪ್ಪನವರ ''ನಲ್ಲರಿಮೆ'', ಮಹಮ್ಮದ್ ರವರ ''ಕರ್ತಪೊನ್ನ್'' ತರ್ಜುಮೆ, ''ಕೊಡವ ಜಾನಪದ ಕಥೆ'' ಎಂಬ ಪುಸ್ತಕವನ್ನು ಬಾಚರಣೆಯೆಂಡ ಅಪ್ಪಣ್ಣನವರು ಬರೆದರು. ಶ್ರೀ ಬಿ. ಕೆ. ಶೆಣೈರವರ ''ಕಾವೇರಿ ಚಿತ್ರಕಥೆ ಪುಸ್ತಕ, ಕೊಡವತಕ್ಕ್ ಎಳ್ತ್‌ಕಾರಡಕೊಟದವರ'' ''ಕೊಡವ ಕವನ ಸಂಗ್ರಹ. ಹಾಗೂ, ಕೊಡವ ಕಥೆ ಗೂಡ್-೧, ಮುಲ್ಲೇರ ಐಯ್ಯಪ್ಪನವರ ''ಕೊಯತ ಮುತ್ತ್'' ಬಚ್ಚೀರ ಚಂಗಪ್ಪನವರ ''ಕಚ್ಚೆದುಡಿ'', ಬಿದ್ದಂಡ ಬೆಟ್ಯಪ್ಪನವರ ''ಆದಿಕಾವೇರಿ, ಪುದಿಯೆರ್ಪ್ರಕೊಳ್, ಚೊಕ್ಕನಕಚಿಕ್ಕು, ನೆಚ್ಚಿತಿಳತ್, ಬೈಂದವನೇ ಬೆಂದು, ಹೀಗೆ ಹಲವಾರು ಪುಸ್ತಕಗಳು, ಇತ್ತೀಚೆಗೆ ಶ್ರೀಮತಿ ಮಂಡೀರ ಜಯಾ ಅಪ್ಪಣ್ಣನವರ ''ಪಾಟ್‌ಜೊಪ್ಪೆ'', ''ಕೊಂಬ್‌ಕೂತ್'' ಎಂಬ ಕವನ ಸಂಗ್ರಹ ಹಾಗೂ ''ವೇದಿಕೆ'' ಎಂಬ ನಾಟಕವೂ ಪುಸ್ತಕ ರೂಪದಲ್ಲಿ ಹೊರಬಿತ್ತು. ಆದಿಯಲ್ಲಿ ಡಾ॥ ಕೊರವಂಡ ಅಪ್ಪಯ್ಯ ಎಂಬವರು, ಇತ್ತೀಚೆಗೆ ಅಪ್ಪನೆರವಂಡ ಕಿರಣ್ ಸುಬ್ಬಯ್ಯನವರು ಕೊಡವ ಭಾಷೆಗೆ ಲಿಪಿ ಕಂಡುಹಿಡಿದರು. ಆದರೆ ಇದು ಜನರ ಮನ್ನಣೆ ಇಲ್ಲದೆ ಪ್ರಚಾರಕ್ಕೆ ಬರಲಿಲ್ಲ. ಹೀಗೆ ೧೯ನೇ ಶತಮಾನದ ಆದಿಯಲ್ಲಿ ಆದಿಕವಿ ಅಪ್ಪಚ್ಚರವರು ಮಾಡಿದ ಕೊಡವ ಸಾಹಿತ್ಯ ಕೃಷಿಯು ಮಧ್ಯದಲ್ಲಿ ಕ್ಷೀಣಿಸಿದರೂ ೧೯ ವರ್ಷಕ್ಕೆ ಹಿಂದೆ ಆರಂಭವಾದ ಕೊಡವ ಭಾಷೆಯ ''ಬ್ರಹ್ಮಗಿರಿ'' ಎಂಬ ವಾರಪತ್ರಿಕೆಯ ಮೂಲಕ ಪುನರುಜ್ಜೀವನಗೊಂಡು, ಐದು ವರ್ಷಕ್ಕೆ ಹಿಂದೆ ಕೊಡವ ಸಾಹಿತ್ಯಕ್ಕೆ ಅಕಾಡೆಮಿಯನ್ನು ತಂದುಕೊಟ್ಟ ಕೀರ್ತಿ ''ಬ್ರಹ್ಮಗಿರಿ'' ವಾರಪತ್ರಿಕೆಯ ಸಂಪಾದಕರಾದ ಶ್ರೀ ಉಳ್ಳಿಯಡ ಪೂವಯ್ಯ ನವರಿಗೂ, ಸರಕಾರದೊಡನೆ ತಮ್ಮ ತನು, ಮನ, ಧನ ಹಾಗೂ ಮಾತಿನ ಧಾಟಿಯನ್ನು ಉಪಯೋಗಿಸಿ ಪ್ರಯತ್ನಿಸಿದ ಈಗಿನ ಕರ್ನಾಟಕದ ಕಾನೂನು ಮಂತ್ರಿ ಮೇರಿಯೆಂಡ ಸಿ. ಶ್ರೀ ನಾಣಯ್ಯನವರಿಗೂ ಸಲ್ಲುತ್ತದೆ. ಅಂತು ಕೊಡವ ಭಾಷಾಭಿಮಾನಗಳು ಈ ಲಿಪಿ ಇಲ್ಲದ ಭಾಷೆಯನ್ನು ಕನ್ನಡ ಕಸ್ತೂರಿ ಲಿಪಿಯೊಂದಿಗೆ ಈ ಮಟ್ಟಕ್ಕೆ ತಂದಿರುವುದು ಮೆಚ್ಚುವಂತ ವಿಷಯವೇ ಸರಿ! ಶುಭಾಶಯ!

* * *

# ಕರಿಬಳೆ

ಕೊಡವ ಮೂಲ ಮತ್ತು ಅನುವಾದ
**ಮಂಡೀರ ಜಯಾ ಅಪ್ಪಣ್ಣ**

ಸ್ಮರಿಸುವೆ ಕಪ್ಪುಬಳೆಯೇ ನಿನ್ನ ಪುಣ್ಯದಾ ಕಥೆಯಾ
ಸ್ಮರಿಸುತೀಪರಿ ಪಾಡುವೆ ನಿನ್ನ ಕಥೆಯಾ
ಮೊರೆಯಿಡುವ ನಿನ್ನ ವ್ಯಥೆಯ ಕಥೆಯಾ
ಮುತ್ತೈದೆ ಕರಿಬಳಿಯೆಂದೇಕೆ ಪೆಸರಪೊತ್ತಿರ್ಪೆ ನೀನ್?
ಮುತ್ತೈದೆಯರನ್ನಷ್ಟೇ ಶೃಂಗರಿಸುವೆಯಾ ನೀ
ಮುತ್ತುಸುತೆಯೊಂದು ಜನ್ಮವೆತ್ತಿದ ದಿನ ಹನ್ನೆರಡಕ್ಕೆ,
ಮುತ್ತಿರುವಾಕರಗಳನು, ಪೆಸರಿಡುವ ನೆಪದಲಿ ನೀ ಮುತ್ತಿಕ್ಕಿ
ಹಬ್ಬಹರಿದಿನಗಳಿಗೆ ಮೆರಗು ನಿನ್ನಾ ತೊಟ್ಟು;
ದಿಬ್ಬಣ  ದಿಬ್ಬಣಕೂ ಶೋಭೆ ನಿನ್ನನ್ನಿಟ್ಟು?
ಅಬ್ಬಬ್ಬ ಥಥಥಳಿಪ ನಿನ್ನಾತೊಟ್ಟವರಾಪಟ್ಟ,?
ಗುಡಿಸುವಾಗ ಜಣಿಜಣಿ!!
ಕಡೆಯುವಾಗ ಕಣಿ ಕಣಿ!!
ಓಡಿ ಒನಕೆಯನ್ನೊಮ್ಮೆ ಬೀಸಿದೊಡೆ, ಜಲ್‌ಜಲ್....ಜಣಿಜಣೀ
ಪೊಂಬಳೆಯೊಡನೆ ಬಿಂಕದೆ ನೀನಲಿವಾಚಂದ
ಪೊಂಬಟ್ಟೆಯುಟ್ಟಾ, ಪೊಂಜೋಡಿಕಡಗ, ನಳಿತೋಳ್ಬಂದಿಕಂಕಣಾದಂದ
ಅಂಬರದಿ ರಸಿಕ ಮಣಿದು ಮುದದಿ ಪಾಡಲಿಚ್ಚಿಪ
ಕೊಂಬುಮದ್ದಳೆಯಾಗಿ, ತನುಪುಳಕಗೊಂಡಿರ್ಪಾಭಾವವ

ಘುಲಿರು ಘುಲಿರೆಂದುಲಿವ ನಿನ್ನ ನಿನಾದವು
ಕಲಿರಾಮರಾವಣರಿಗೂ ಅರುಹುವುದು ತನ್ನ ಹೆಂಡಿರ ಇರವು
ವಲ್ಲಭನು ಕಾಲನಾದೊಡೆ ಆಚಾರದ ನೆಪದೆ, ಚಚ್ಚಿಪುಡಿಗೈವರು
ತಾಳಲಾರೇ.... ಈ ನೋವಾ? ಗಂಡ ಗಂಡರ ಗಂಡನೇ
ಇಳೆಯಲಿ ಇದ ತಡೆಯಲಾರೆಯಾ?

* * *

# ಹುಟ್ಟಿ ಬಾ ಕವಿತಾ

ಕೊಡವ ಮೂಲ : ಮಾಳೇಟಿರಾ ದೊರೆ ತಿಮ್ಮಯ್ಯ
ಅನು : ಚೊಟ್ಟೆಂಗಡ ನವೀನ್ ನಾಚಯ್ಯ

ಸಾಹಿತ್ಯ ಹೊಲದಲ್ಲಿ ಮೊಳಕೆ ಇಟ್ಟು।
ಸಹಜ ಅನುಭವದ ಗೊಬ್ಬರವನಿಟ್ಟು।
ಅಲ್ಲಿ ಜ್ಞಾನದ ನೀರನ್ನು ಸುರಿದು।
ಇಲ್ಲಿ ಕಷ್ಟ ಸುಖದ ಸಂಗಮದಿ ಹರಿದು ಹುಟ್ಟಿ ಬಾ ಕವಿತಾ॥

ಕವಿಯ ಹೃದಯದಲ್ಲಿ ಅವಿತಿರುವೆ ಬಾ।
ಭಾವನೆಯ ಬಾಗಿಲ ತಟ್ಟಿ ಹೊರ ಬಾ।
ಕವಿಗಳಾ ಮನಸನ್ನ ಮುಟ್ಟಿ ಬಾ।
ಕೆಟ್ಟ ಹಣ ಕಟ್ಟೆಯ ಕುಟ್ಟಿ ಬಾ ಹುಟ್ಟಿ ಬಾ ಕವಿತಾ॥

ಎದೆಯೊಳಗದಲ್ಲಿ ಜ್ವಾಲಾಮುಖೀನಾ?
ಅಡಗಿದೇ ಕಷ್ಟ ನಿಷ್ಠುರ ದುಃಖ ದುಮ್ಮಾನ!
ಲಾವಾರಸವಾಗಿ ಹೊರ ಬೀಳಲಿ।
ಆವಿಯಾದ ತಂಪು ದೇಹಕ್ಕಿರಲಿ ಹುಟ್ಟಿಬಾ ಕವಿತಾ॥

ಕಾವ್ಯದಾ ಹೊಳೆಯಾಗಿ ಉದಿಸಿ ಬಾ।
ಕಲ್ಯಾಣಕ್ಕಾಗಿ ಜಗದಿ ಹಾಡಿ ಬಾ।
ಕಷ್ಟ ಸುಖವಾ ಜನರ ಅರಿತು ಬಾ।
ಕೆಟ್ಟ ಜನರ ಸಂಹಾರಕ್ಕೆ ಎದ್ದು ಬಾ। ಹುಟ್ಟಿ ಬಾ ಕವಿತಾ॥

ಸುಂದರಾ ಕೊಡಗಿನಲ್ಲಿ ಹೊನ್ನಾಗಿ ಬಾ!
ಸನ್ನಿಧಿಯಲ್ಲಿ ದೇವಿಯ ಹೂವಾಗಿ ಬಾ!
ಇಗ್ಗುತಪ್ಪನ ನಾಡಲ್ಲಿ ಮಿನುಗಿ ಬಾ!
ಸಾಹಿತ್ಯ ದೀವಿಗೆ ಹಚ್ಚಿ ಬಾ ಹುಟ್ಟಿ ಬಾ ಕವಿತಾ॥

* * *

# ಸ್ವಪ್ನ

ಕೊಡವ ಮೂಲ : ಡ್ಯಾನಿ ನಾಣಯ್ಯ
ಅನು : ಕೇಕಡ ಚಂಗಪ್ಪ

ಬೆಂಗಳೂರು ಕವಿಗೋಷ್ಠಿಗೆ, ಬರಲೊಂದು ಗ್ಯಾನ
ಹಂಗೇ ಮಾಡಿದೆ ಮೊನ್ನೆ ಹುತ್ತರಿ ಹಬ್ಬಾನ
ಏನು ಮಾಡೋಣ, ತಂಬಿಟ್ಟು ಗೆಣಸು ಕಂಡರೆ ಬಿಡುವೆನಾ?
ಇನ್ನು ಜಾಸ್ತಿ ತಿಂದದೇ ನೆಪ, ತಪ್ಪೇನಾ?

ಇಡೀ ರಾತ್ರಿ ಚೊಂಬು ನೀರೆತ್ತಿ ಓಡಾಡಿದೆ ನಾ.... ಅಯ್ಯೋ.....
ಇನ್ನು ಹೇಗೆ ಬರೆಯಲಿ ನಾ ಕವನ?
ಮೊನ್ನೆ ಏನೋ ಹಂಗಾಯ್ತು ಅನ್ನೋಣ
ನಿನ್ನೆ ಹೇಗೋ ಕವನ ಬರೆದೆ ಕೇಳಣ್ಣಾ!

ಹಾಗೇ ರಾತ್ರಿ ಇಡೀ ಬರೆದೆ ಮನಸ್ಸಿಗೆ ಬಂದಿದನ್ನ;
ಆಗ ಬೆಳಿಗೆದ್ದು ನೋಡಿದರೆ ಎಲ್ಲಿದೇ ಕವನ?
ಈಗ ಗೊತ್ತಾಯ್ತು ನಾ ಕಂಡಿದ್ದೆಲ್ಲಾ ಸ್ವಪ್ನ
ಹೀಗೆ ನಿಮಗೆಲ್ಲರಿಗೂ ನನ್ನ ನಮನ

* * *

# ನನಗೊಬ್ಬ ಹೆಂಡತಿ

ಕೊಡವ ಮೂಲ : ಕೋಳೀರ ಸನ್ನು ಕಾವೇರಪ್ಪ
ಅನು : ಮಂಡೀರ ಜಯಾ ಅಪ್ಪಣ್ಣ

ಎಲ್ಲಾರಿಗೊಬ್ಬೊಬ್ಬ ಹೆಂಡತಿ ।
ಇಲ್ಲಿ ನಾ ಕಟ್ಕೊಂಡೆ ನನ್ನಗೊಬ್ಬ ಹೆಂಡತಿ।
ಅಂದ ನೋಡಲು ಚಂದ ಕೆಂಪಣ್ಣು ।
ಬಯ್ದರೆ ಬಿಡುವಳು ಮೊಟ್ಟೆಕಣ್ಣು।
ಅದೊ ತಪ್ಪಿ ಮಾತಾಡಿದರೆ ನನ್ನ ಕೈಕಾಲುಗಿಣ್ಣು ।

ಅಡಿಗೆ ಮಾಡುವಳು, ಬಲು ಬೇಗನೆ ।
ಆದರೆ ಉಣ್ಣಲಾಗದು, ನಾ ಒಡನೆ ।
ಕರಿಮಸಾಲೆ ಹಾಕಿ, ಕಾಫಿ ಮಾಡುವಳು ।
ಕಾಫಿ ಪುಡಿ ಹಾಕಿ, ಹಂದಿಮಾಂಸದೊಳು ।
ಕೇಳು ನೀ ನನ್ನೂಟ ದಿನವೂ ಹೋಟೇಲೊಳು ।

ಕವನ ಬರೆಯಲು ಕೂತರೆ, ಬದಿಗಿರುವಳು ।
ಕೈಯಲ್ಲಿ ಕುಟ್ಟುವಳು, ನನ್ನ ತಲೆಗೋಳು ।
ಕವಿಯಾಗಿ ನೀ ಹೀಗಿರುವೆಯಾ, ಈ ಮನೆಯಲ್ಲಿ?
ಕೆಲಸಮಾಡು ಹೋಗಿ ಕಾಫಿ ತೋಟದಲಿ ।
ಕವಿಗೋಷ್ಠಿಯಲ್ಲಿನ್ನು ನಾನೇನು ಬರೆದೋದಲಿ?

ಅವಳಿಗರಿಯದೆ ಗೀಚಿದೆ ತುಂಡು ಕಾಗದದಲಿ ।
ಅಯ್ಯೋ ಕಣ್ಣತಪ್ಪಿಸಿ, ತುರುಕಿದೆ ಈ ಜೇಬಿನಲಿ
ಹೇಗೆಲ್ಲೋ ತಲಪಿ ಓದಿದೆ ನೋಡಿ ಈ ಕವಿಗೋಷ್ಠಿಯಲಿ
ಬೇಗ ಹೋಗುವೆನಾ ಅವಳಗರಿಯದೆ ಕೆಂಪುಬಸ್ಸಲ್ಲಿ
ಈಗ ಬೇಡುವೆನು ನಾ ಓದಿದ ಹೇಳದಿರಿ ನನ್ನ ಮನೆಯಲ್ಲಿ

* * *

# ನಾ ಬಯಸಿದ ಕೊಡಗು

ಕೊಡವ ಮೂಲ : ರಘುನಾಥ ನಾಯಕ್
ಅನು : ಮಂಡೀರ ಜಯಾ ಅಪ್ಪಣ್ಣ

ನಾನು ಹುಟ್ಟಿದ ನಾಡಿದು ।
ಹೊನ್ನ ಮಾಲೆಯ ಕೊಡಗಿದು ।
ಕಾವೇರಿ ಇಗ್ಗುತಪ್ಪ ಬೀಡಿದು।
ಕೊಡಗು ಪುಣ್ಯಭೂಮಿ ನನ್ನದು ।

ತಂಪು ನೆಲ,ತಂಪು ಜಲ, ತಂಪು ಗಾಳಿ ಇಲ್ಲಿ।
ಕೆಂಪು ಜನ, ಎಲ್ಲ ಸಂಸ್ಕೃತಿ ಭಾಷೆ ಇಲ್ಲಿ।
ಕಾಫಿ ಕಿತ್ತಳೆ ಜೇನು ಏಲಕ್ಕಿ ಅಲ್ಲಿ ।
ಕಾವೇರಿ ಭೋರ್ಗರೆದ ಇರ್ಪುಪಾತಲ್ಲಿ ।

ಪಟ್ಟೋಲೆ ಪಳಮೆ ಅದೋ ಕೊಡವ ಪುದುಮೆ ।
ಗಟ್ಟಿಕವಿ ಹರಿದಾಸ ಕಾರ್ಯಪ್ಪ ಹೆಮ್ಮೆ ।
ಕೈಲ್ ಮೂರ್ತ, ಕಾವೇರಿ ಸಂಕ್ರಮಣ ಹಬ್ಬ ।
ಖಂಡಿತಾ ಹರಸುವಳು ದೇವಿತಾಯಬ್ಬೆ ।
ತಿಳಿಕನ್ನಡ ತಾಯ ಹಿರಿಮಗನು ನಾನು।
ತುಳು ತಾಯ ಪ್ರೀತಿಯ ಪುತ್ರನು ನಾನು ।
ಕೊಡಗು ಶ್ರೀಮಾತೆಯ ಮೊಮ್ಮಗನು ನಾನು ।
ಕೊಡವ ಧೀರರ ಭಾರಿ ಸೋದರನು ನಾನು।

ನಾನು ಕೊಡವ ಭಾಷಾ ದೇಶಾಭಿಮಾನಿ ।
ಕನ್ನಡ ತುಳು, ಕೊಡವ ಸಾಹಿತ್ಯಾಭಿಮಾನಿ ।
ಭಾರತ ಭಾಷೆಯ ಭಾರಿ ಅಭಿಮಾನಿ ।
ಭಾರಿ ಸ್ವಾಭಿಮಾನಿ ವಿಶ್ವಾಭಿಮಾನಿ.

* * *

# ಧರ್ಮ-ಕರ್ಮ

ಕೊಡವ ಮೂಲ : ಕೋಟ್ರಮಾಡ ಜಿ. ಸರಸ್ವತಿ
ಅನು : ಮಂಡೀರ ಜಯಾ ಅಪ್ಪಣ್ಣ

ಧರ್ಮ ಕರ್ಮಕ್ಕೆ, ಪೈಪೋಟಿ । ಅನುದಿನವಿದೆ ಕೇಳು ।
ಮರ್ಮವರಿತು, ಅಗಿದುನುಂಗು । ಧರ್ಮಿಷ್ಟನೇ ಕೇಳು ।
ಮರ್ಮವರಿತ, ಅಜ್ಜಪ್ಪ । ಮಣಿಗೆಜ್ಜೆ ಕೋಲ ಹಿಡಿದಿರುವ ಹೆದರದಿರು ನೀ.......

ಧರ್ಮಕ್ಕೆ, ಎಂದಿಗೂ ಸಾವಿಲ್ಲ । ಸೋಲಿಲ್ಲ ಕೇಳು ನೀ........
ಕರ್ಮಿಹಿಡಿತವಿಲ್ಲದ, ಅಜ್ಞಾನಿ । ಅವಂಗೆ ಅಲ್ಪಾಯಸ್ಸು ನೋಡು ।
ಕರ್ಮಿಯಾ ಒದೆ । ಜಳ್ಳು ಬತ್ತ, ಆಟಸಾಗಿತಾ ಕಂಸಂಗೆ,
ಕೃಷ್ಣನೋಡೆ, ವ್ಯಾಸಭಾರತವನೊಮ್ಮೆ ಓದು

ಧರ್ಮ ಬಿಟ್ಟು ಹೆಜ್ಜೆ ಇಡಬೇಡ । ಸತ್ಯವೇ ಗುರು ನಂಬುನೀ
ಧರ್ಮದಾ ತೀರ್ಥಗುಂಡಿಗೆ । ಬ್ರಹ್ಮಗಿರಿ ಯಜ್ಞವೇದಿಕೆಯ
ಹೊತ್ತುನಿಂತಿದೆ ನೋಡು ನೀ.....

ಕರ್ಮಪರಿಹಾರಿಣಿ, ಲೋಕಪಾವನೆಯ ತೀರ್ಥೋದ್ಭವವನ್ನು
ತುಳಿಯಲು ಅದು ನೀಚ ಪೋಣಿಸಿದ ಹೂವಲ್ಲ !!

ಧರ್ಮಕರ್ಮದಾ ಯುದ್ಧ । ಅದು ಆ ಕುರುಕ್ಷೇತ್ರವೇ.....
ಧರ್ಮದ ಢಮರುಗ ಬಾರಿಸಿದ । ಧರ್ಮರಾಜಂಗೆ ಭುಜಕೊಟ್ಟ ಆ ಕೃಷ್ಣನೇ !!

ಮರ್ಮವರಿಯದ, ಅಂಧ ಕುರುರಾಜನ । ಪುಂಡಕತೆ
ಯನ್ನು, ವ್ಯಾಸ ಭಾರತದೊಳಿನ್ನೊಮ್ಮೆ ಓದು ನೀ.......
ಓದು ನೀ......... ಓದು ನೀ

* * *

# ತವರ ಋಣ

ಮೂಲ : ಅಮ್ಮಣಿಚಂಡ ಪ್ರವೀಣ್ ಚಂಗಪ್ಪ
ಅನು : ಮಾಳೇಟಿರಾ ದೊರೆ ತಿಮ್ಮಯ್ಯ

ಹೆತ್ತ ತಾಯ ಮರೆತು, ಮೆಟ್ಟಿಲಿಳಿದ ದಿನ
ಮುತ್ತಂತ ತವರ ಮನೆ ತೀರಿದ ಋಣ
ಪ್ರೀತಿಯ ಗಂಡನ ಕೈಹಿಡಿದು ನಡೆದಂದೆ
ಅತಿಯಾಗಿ ಬೆಳೆಯಿತು ನೀತಿ ಅಂದೆ.

ಅತ್ತೆಮನೆಯ ಗೋಳು ಹೇಳದಿರು
ಹೆತ್ತಮ್ಮನ ಮನವ ಕೊಲ್ಲದಿರು
ಮನೆದೇವರೆ ನಿನಗೆ ನಿನ್ನ ಪತಿಯು
ಇನ್ನು ಬಾಳಿಗೆಲ್ಲ ಆ ಮನೆಯೆ ಗತಿಯು.

ಮೈಯೆಲ್ಲ ಮಸಿಯಾಯ್ತು ಕೈಯೆಲ್ಲ ಮಣ್ಣಾಯ್ತು
ಮೆಲ್ಲನೆ ನೆಪವ ತೆಗೆಯದಿದ್ದರಾಯ್ತು
ಬಡತನ ಸಿರಿತನ ಎರಡರಲ್ಲೂ
ಒಡನಾಡಿ ಬದುಕು ಎಲ್ಲರಲ್ಲು.

ತವರ ಕೀರ್ತಿಯ ನೀ ಅಲ್ಲಿ ಮೆರೆದು
ತಂದೆ ತಾಯಿಗೆ ನೀ ಕೀರ್ತಿಯ ತಂದು
ಕಾಲ ಕಳೆದಂತೆಲ್ಲ ಮಕ್ಕಳ ತಾಯಾಗಿ
ಕೀರ್ತಿಯನು ನೀ ತರುವೆ ಅಜ್ಜಿಯಾಯ್ತು.

* * *

# ಕೊಡಗಿನ ಬೆಡಗು

ಕೊಡವ ಮೂಲ : **ಚೊಟ್ಟೆಂಗಡ ನವೀನ್ ನಾಚಯ್ಯ**
ಅನು : **ಕೋಟ್ರಮಾಡ ಜಿ. ಸರಸ್ವತಿ**

ಹಾರುವ ದುಂಬಿಯ ಸ್ವರದಲಿ ಕೇಳಿರಿ
ಕೊಡಗಿನ ಬೆಡಗನ್ನ ।

ಹಾಗೆಯೆ ಕಾಣಲಿ ಕಾವೇರಮ್ಮನ
ಹೊನ್ನಿನ ಬೆಳಕನ್ನ..... ।

ಹರಿಯುವ ಹೊಳೆಯು ಜುಳು ಜುಳು ಜುಳು ಜುಳು
ಬೆಳಗಲಿ ಕೊಡಗನ್ನ.

ತರಲಿ ನಾಡಿಗೆ ಕಾವೇರಮ್ಮನು
ಬೆಳ್ಳಿಯ ಕಂಪನ್ನ

ವೀರರು ಶೂರರು ಹುಟ್ಟಿದ ನಾಡು
ಅದು ಕೊಡವರ ಬೀಡು...... !

ಉಳಿಯಲಿ ಬೆಳೆಯಲಿ ಕೊಡಗಿನ ಸಂಸ್ಕೃತಿ
ಪ್ರಜೆಗಳ ಹುರುಪಲ್ಲಿ.

ಕೊಡಗಿನ ಮಣ್ಣು, ಕೊಡಗಿನ ನೀರು
ಇರಲಿ ಎಲ್ಲರಿಗೂ

ಕೊಡವರ ಕೀರ್ತಿ ಕೊಡವರ ಸ್ಫೂರ್ತಿ
ಕಾಣಲಿ ಸರ್ವರಿಗೂ.....

ಕೊಡಗಿನ ಕಲೆ ಕೃಷಿ ಹೊಳೆಯ ನಿನಾದ
ನೋಡುವ ನಾವೆಲ್ಲಾ........ಬನ್ನಿ......

ಹಾರಲಿ ಹಾರಲಿ ಮೇಲಕೆ ಏರಲಿ
ನಮ್ಮಯ ಸಂಸ್ಕೃತಿ ಎನ್ನಿ.

* * *

# ಅನಿಕೇತನ

- ಹಿಂದಿ ಕಥಾ ಸಾಹಿತ್ಯಕ್ಕೊಂದು ಹೊಸ ಆಯಾಮ ನೀಡಿದವರು ಕಮಲೇಶ್ವರ. ಅವರ 'ಸವಾ ಎಂಟು ಗಂಟೆಯಾಗಿತ್ತು' ಎಂಬ ಕಥೆ ತನ್ನ ಕಲಾತ್ಮಕ ಮತ್ತು ಸೃಜನಶೀಲ ಗುಣದಿಂದ ಓದುಗನಿಗೆ ವಿಶಿಷ್ಟ ಪರಿಣಾಮವನ್ನುಂಟುಮಾಡುತ್ತದೆ.
- ಇಟಲಿ ದೇಶದ ಪ್ರಾಚೀನ ಮಹಾಕವಿ ವರ್ಜಿಲನ 'ಈನಿಯಡ್' ಮಹಾಕಾವ್ಯದ ಎರಡನೆ ಕಾಂಡದ ಸಂಕ್ಷಿಪ್ತ ಅನುವಾದವೇ 'ಟ್ರಾಯ್ ನಗರಕ್ಕೆ ಬೆಂಕಿ ಬಿದ್ದ ರಾತ್ರಿ ಏನಾಯಿತು'. ಯುದ್ಧದಲ್ಲಿ ಭಾಗವಹಿಸಿ ಹೋರಾಡಿದ ಪ್ರತ್ಯಕ್ಷದರ್ಶಿಯ ಒಂದು ವೀರಗಾಥೆ ಇದು.
- ಫ್ರೆಂಚ್ ಸಿಂಬಲಿಸ್ಟ್ ಕವಿಗಳ ಕೇಂದ್ರ ಸ್ಫೂರ್ತಿ ಆರ್ಥರ್ ರ್‍ಯಾಂಬೋ. ರ್‍ಯಾಂಬೋಗೆ ಕಾವ್ಯವೆಂಬುದು ಬದುಕಿನ ಒಂದು ಅಂಗ. ರೋಮ್ಯಾಂಟಿಕ್ ಕಾವ್ಯದಿಂದ ದೂರ ಸರಿದ ರ್‍ಯಾಂಬೋ ತಮ್ಮ ಕವಿತೆಗಳ ಮೂಲಕ ಪ್ರತಿಮಾಲೋಕವನ್ನು ತೆರೆದಿಟ್ಟ ಕವಿ.
- ತುಳು ಪಂಚ ದ್ರಾವಿಡ ಭಾಷೆಗಳಲ್ಲಿ ಒಂದು. ಸುಂದರವಾದ ಜನಪದ ಸಾಹಿತ್ಯ ಹಾಗೂ ಸಾಂಸ್ಕೃತಿಕ ಪರಂಪರೆ ತುಳುನಾಡಿಗೆ ಇದೆ. ತನ್ನದೇ ಆದ ವೈಭವೀಕೃತವಾದ ಪರಂಪರೆಯ ಅಡಿಗಲ್ಲು ತುಳು ನಾಡಿನ ವೈಶಿಷ್ಟ್ಯ.
- ಕೊಡಗಿನ ಮೂಲನಿವಾಸಿಗಳಾದ ಕೊಡವರ ಸಾಂಸ್ಕೃತಿಕ ಪರಂಪರೆ ಅಲ್ಲಿನ ಕೋಲಾಟ, ಬೊಳಕಾಟ, ಉಮ್ಮತಾಟ, ಕೊಂಬಾಟ ಪರಿಯಕಳಿಯಲ್ಲಿ ಪ್ರತಿಬಿಂಬಿತವಾಗಿದೆ.